# ಪಾನಸಿ

ಅಕ್ಟೋಬರ್ 2005 ತಿಂಗಳ ಪತ್ರಿಕೆ

- ಸಾರಾ ಜೋಸೆಫ್ - ಲೇಖಕಿಯಾಗಿ
- ಹಿಂದೂ ಉತ್ತರಾಧಿಕಾರ ಮಸೂದೆ ಒಂದು ಚಾರಿತ್ರಿಕ ನೋಟ
- 'ಜಯ' ಮಹಾಭಾರತಕ್ಕೆ ಸ್ತ್ರೀವಾದಿ ದೃಷ್ಟಿಕೋನದ ಕನ್ನಡಿ
- ಕೌಟುಂಬಿಕ ದೌರ್ಜನ್ಯ
- ಆತ್ಮಹತ್ಯೆಯೇ ಪರಿಹಾರವಾಗಿತ್ತೆ? ನಂದಿನಿ ವಿಶ್ವನಾಥ್,
- ನಾನಿಲ್ಲದೆ ಊರಿಲ್ಲ
- ಜನಪರ ಚಳುವಳಿಗಳನ್ನು ಹತ್ತಿಕ್ಕುವ ಪ್ರಭುತ್ವದೊಂದಿಗೆ ಶಾಮೀಲಾಗಿರುವ ಎನ್.ಜಿ.ಓಗಳು - ನಂದಿತಾ ಹಕ್ಸರ್

**ಮಾನಸ** ತಿಂಗಳ ಪತ್ರಿಕೆ ಅಕ್ಟೋಬರ್ 2005
ಸಂಪುಟ : 20 ಸಂಚಿಕೆ : 9



**ವಿಳಾಸ :**
**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

**ಸೂಚನೆ :**

| | |
|---|---|
| ಬಿಡಿಪ್ರತಿ | 10-00 ರೂ. |
| ವಾರ್ಷಿಕ ಚಂದಾ | 100-00 ರೂ. |
| ಸಂಸ್ಥೆಗಳಿಗೆ | 150-00 ರೂ. |


## ಈ ಸಂಚಿಕೆಯಲ್ಲಿ.....



### ಮೈಸೂರು

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
**ವೆಂ.ವನಜ : 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017**

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ನಾಲ್ಕು ದಶಕಗಳ ಕಾಲ ಮಹಿಳಾ ಸಂಘಟನೆಗಳು ನಡೆಸಿದ ಹೋರಾಟದ ಫಲವಾಗಿ ಕೌಟುಂಬಿಕ ದೌರ್ಜನ್ಯ ವಿರೋಧಿ ಕಾಯಿದೆ ಇಂದು ನಮ್ಮ ಮುಂದಿದೆ, ನಾಲ್ಕು ಗೋಡೆಯ ಒಳಗಡೆ ಮಹಿಳೆಯರ ಮೇಲೆ ನಡೆಯುವ ಹಿಂಸೆ, ಅತ್ಯಾಚಾರ, ವರದಕ್ಷಿಣೆ, ಕಿರುಕುಳ, ಸಾವು, ದೈಹಿಕ ಹಾಗೂ ಮಾನಸಿಕ ಹಿಂಸೆಯ ವಿವಿಧ ಸ್ವರೂಪವನ್ನೂ ಬೆಳಕಿಗೆ ತರುವಲ್ಲಿ ಮಹಿಳಾ ಸಂಘಟನೆಗಳ ಪರಿಶ್ರಮ ಅಪಾರ. ಮಹಿಳೆಯ ಮೇಲೆ ನಡೆಯುತ್ತಿರುವ ಹಿಂಸೆಯನ್ನೂ ವೈಯಕ್ತಿಕ ಗೊಳಿಸಿ ಕತ್ತು ಹಿಸುಕುವ ವ್ಯವಸ್ಥೆಯ ಕರಾಳ ಮುಖವಾಡವನ್ನೂ ಕಳಚಿ, ಸುವ್ಯವಸ್ಥಿತ ಐತಿಹಾಸಿಕ ಹುನ್ನಾರಗಳನ್ನು ಗುರುತಿಸಿ ಮಹಿಳಾ ಸಮಸ್ಯೆಗೆ ರಾಜಕೀಯ ಸ್ವರೂಪವನ್ನು ಮಹಿಳಾ ಸಂಘಟನೆಗಳು ನೀಡಿದವು. ನಿರಂತರ ಹೋರಾಟದ ಫಲವಾದ ಈ ಕಾನೂನು ಮಹಿಳೆಗೆ ರಕ್ಷಣೆ ನೀಡುವಲ್ಲಿ ಒಂದು ಮಹತ್ವದ ಮೈಲಿಗಲು.

ಈ ಕಾಯಿದೆ ಮಹಿಳೆಯರ ದೈನಂದಿನ ಜೀವನದ ಮನೆಯ ಬಾಗಿಲಿಗೆ ಬರಬೇಕು. ಈ ನಿಟ್ಟಿನಲ್ಲಿ ಮಹಿಳಾ ಸಂಘಟನೆಗಳು ವ್ಯವಸ್ಥಿತವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ. ಈ ಕಾನೂನಿನ ಬಗ್ಗೆ ಸೂಕ್ತ ಮಾಹಿತಿಯನ್ನು ಎಲ್ಲ ಮಹಿಳೆಯರಿಗೆ ನೀಡಬೇಕಾಗುತ್ತದೆ. ರಕ್ಷಣೆ ಪಡೆಯ ಬಯಸುವ ಮಹಿಳೆಯರಿಗೆ ಸೂಕ್ತ ಮಾರ್ಗದರ್ಶನ ಹಾಗೂ ನೆರವನ್ನೂ ನೀಡಬೇಕಾಗುತ್ತದೆ.

ಭ್ರಷ್ಟತೆ ಹಾಗೂ ಅಧಿಕಾರಶಾಹೀ ವ್ಯವಸ್ಥೆಯಲ್ಲಿನ ಮಿತಿಗಳು ಕಾನೂನಿನ ಅರ್ಥವನ್ನೇ ನಿರರ್ಥಕ ಗೊಳಿಸುವುದರಿಂದ ಈ ಸಮಸ್ಯೆಗಳ ವಿರುದ್ಧವೂ ಸಂಘಟನೆಗಳು ಹೋರಾಡುವುದು ಅನಿವಾರ್ಯವಾಗುತ್ತದೆ. ಕಾನೂನನ್ನು ಜಾರಿಗೆ ತರುವಲ್ಲಿನ ಮಿತಿಗಳ ಬಗ್ಗೆಯು ಮಹಿಳೆಯರು ಸಂಘಟಿತರಾಗಿ ಧ್ವನಿ ಎತ್ತಬೇಕಾಗುತ್ತದೆ.

# ಸಾರಾ ಜೋಸೆಫ್ - ಲೇಖಕಿಯಾಗಿ

ಸೆಪ್ಟೆಂಬರ್ ಸಂಚಿಕೆಯಲ್ಲಿ ಪಟ್ಟಾಂಬಿಯ 'ಮಾನುಷಿ' ಸಂಘಟನೆಯ ಬಗ್ಗೆ ಬರೆಯಲಾಗಿತ್ತು. ಸಾರಾರವರು ಲೇಖಕಿಯಾಗಿ ತಮ್ಮ ಅಭಿಪ್ರಾಯಗಳನ್ನು ಗೀತಾ ಹರಿಹರನ್ ಜೊತೆ ಹಂಚಿಕೊಂಡಿರುವುದನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಒಬ್ಬ ಕ್ರಿಯಾಶೀಲ ಕಾರ್ಯ ಕರ್ತರಾಗಿ ಹಾಗೂ ಲೇಖಕಿಯಾಗಿ ಸಾರಾ ಹೇಗೆ ಯೋಚಿಸುತ್ತಾರೆ ಹಾಗೂ ತಮ್ಮ ಸೃಜನಶೀಲ ಬರವಣಿಗೆಯನ್ನು ಹೇಗೆ ನೋಡುತ್ತಾರೆ ಎಂಬುದು ಮಹಿಳಾ ಚಳುವಳಿಯ ಭಾಗವಾಗಿರುವುದರಿಂದ ಅವರ ಕೊಡುಗೆ ಅತ್ಯಂತ ಮೌಲ್ಯಯುತವಾದುದು. ಸಾರಾ ಜೋಸೆಫ್‌ರವರ ನಿಲುವುಗಳನ್ನು, ಲೇಖಕಿಯಾಗಿ ಅವರ ಭಾವನೆ, ಅನುಭವಗಳನ್ನು ಎರಡನೆಯ ಭಾಗದಲ್ಲಿ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.

ಸಾರಾ ಜೋಸೆಫ್ ರವರ 'ವೈಟ್ ಮೂನ್ ಮತ್ತು ಬ್ಲ್ಯಾಕ್ ಮಿರರ್' ಕಥೆಯನ್ನು ಅವರ 'ಮಾನುಷಿ' ಸಂಘಟನೆಯ ಪ್ರಚಾರ ಪ್ರಕ್ರಿಯೆಯಾಗಿ ನೋಡಲಾಗುತ್ತದೆ. ಇದಕ್ಕೆ ಪ್ರತಿಕ್ರಿಯಿಸುವ ಸಾರಾ 'ಮಾನುಷಿ' ಸಂಘಟನೆಯ ನಂತರವೇ ತಾವು ಮಹಿಳಾ ಸಮಸ್ಯೆಗಳನ್ನು ಸಮರ್ಪಕವಾಗಿ ಅರ್ಥಮಾಡಿಕೊಳ್ಳಲು ಪ್ರಾರಂಭಿಸಿದ್ದು ಎನ್ನುತ್ತಾರೆ. ತಾವು ಮೊದಲು ಬರೆದ ಕಥೆಗಳಲ್ಲಿ, ಕವನಗಳಲ್ಲಿ ಮಹಿಳೆಯರ ಚಿತ್ರಣ ತಮಗೆ ತೃಪ್ತಿ ತಂದಿಲ್ಲ. ಈ ಸಮಾಜ ಮಹಿಳೆಯರ ಬಗ್ಗೆ ತಪ್ಪು ಭಾವನೆ, ಕಲ್ಪನೆಗಳನ್ನು ಬೆಳೆಸುತ್ತದೆ ಹಾಗಾಗಿ ಪುರುಷರು ತುಂಬಾ ಸಹಜವಾಗಿ ಎಂಬಂತೆ ಈ ಸಮಾಜದ ಅಭಿಪ್ರಾಯಗಳಿಗನುಗುಣವಾಗಿ ಸ್ತ್ರೀಯರನ್ನು ಚಿತ್ರಿಸುತ್ತಾರೆ. 'ಮಾನುಷಿ'ಯಲ್ಲಿ ತೀವ್ರವಾಗಿ ತೊಡಗಿಸಿಕೊಂಡ ಮೇಲೆಯೇ ಈ ಬಗ್ಗೆ ಸಾರಾರವರಿಗೆ ತೀವ್ರವಾಗಿ ಕಟುವಾದ ಟೀಕೆಗಳು ಉದ್ಭವಿಸಲಾರಂಭಿಸಿದವು. ಸಾರಾ ಹಾಗೂ ಅವರ ಜೊತೆಯವರು ಎಲ್ಲಿಂದ ಪ್ರಾರಂಭಿಸಿದರೋ ಅಲ್ಲಿಯೇ ನಿಂತಿರಲಿಲ್ಲ. ಮೊದಲಿದ್ದ ರಾಜಕೀಯ ಅಥವಾ ಸಾಮಾಜಿಕ ಅಭಿಪ್ರಾಯಗಳೇ ಅವರಲ್ಲಿ ಈಗಲೂ ಇರಲಿಲ್ಲ. ಬದಲಾವಣೆ ನಿರಂತರವಾಗಿರುತ್ತದೆ. ಈ ಬದಲಾವಣೆಗಳು ಅವರ ಬರಹಗಳಲ್ಲೂ ಅಭಿವ್ಯಕ್ತಿಗೊಳ್ಳುತ್ತವೆ. ಸಣ್ಣ ಕಥೆ ಅವರ ಅಭಿವ್ಯಕ್ತಿಯ ಮಾಧ್ಯಮ. ಸಣ್ಣ ಕಥೆಯನ್ನು ಅದರ ಒಟ್ಟು ಅರ್ಥದಲ್ಲಿ ತಾವು ನೋಡುವುದಾಗಿ ಸಾರಾ ನುಡಿಯುತ್ತಾರೆ. ತಮ್ಮ ಯಾವುದೇ ಕಥೆ 'ಮಾನುಷಿ' ಸಂಘಟನೆಯ ಪ್ರಚಾರ ಕ್ರಿಯೆಯಾಗಿಲ್ಲ. ತಾವು ಕಂಡ ಹಾಗೆ ಮಹಿಳೆಯನ್ನು ಚಿತ್ರಿಸಿರುವುದಾಗಿ ಸಾರಾ ನುಡಿಯುತ್ತಾರೆ.

ಸಾರಾ ಪದ್ಯ ಬರೆಯುವುದರಿಂದ ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು. ನಂತರದಲ್ಲಿ ಸಣ್ಣ ಕತೆ ಬರೆಯಲಾರಂಭಿಸಿದರು. ಅವರ 'ಪಾಪತಾರ' ಸಣ್ಣ ಕಥೆಗಳ ಸಂಕಲನ. ಇದನ್ನು ಮಲೆಯಾಳಂನ ಸ್ತ್ರೀವಾದಿ ಬರಹಗಳಲ್ಲಿ ಒಂದು 'ಮೈಲ್‌ಸ್ಟೋನ್' ಆಗಿ ಪರಿಗಣಿಸಲಾಗುತ್ತದೆ. ಬದುಕಿನ ಪ್ರತಿ ನಿತ್ಯದ ಸನ್ನಿವೇಶ, ವಿವರಗಳಲ್ಲಿ ಆಕೆ ಕೊಡುವ ತಿರುವುಗಳು ಆಶ್ಚರ್ಯ ಹುಟ್ಟಿಸುವಂತಹವು. ಇವರ 'ರಾಮಾಯಣ ಕಥಕ್ಕಲ್'ದಲ್ಲಿ 'ರಾಮಾಯಣ'ವನ್ನು ವಿಶಿಷ್ಟ ಬಗೆಯಿಂದ ನೋಡಲಾಗಿದೆ. ಇವರು ತಮ್ಮ ಬರಹಗಳಲ್ಲಿ ಮಹಿಳೆಯರಿಗೇ ವಿಶಿಷ್ಟವಾಗಿರುವ ಭಾಷೆ, ಭಾವನೆಗಳನ್ನು ಹಿಡಿದಿಡಲು ಪ್ರಯತ್ನಿಸುತ್ತಾರೆ. ಇವರ 'ಅಲಾಹಯುಧೆ ಪೆನ್‌ಮಕ್ಕಲ್' ಕಾದಂಬರಿಗೆ ಕೇಂದ್ರ ಹಾಗೂ ರಾಜ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

'ಅಲಹ'- ಬಗ್ಗೆ ಹೇಳುತ್ತಾ ಸಾರಾ ಇದನ್ನು ಬೈಬಲ್‌ನಲ್ಲಿ ಅಪರೂಪದಲ್ಲಿ ಬಳಸಿರುವುದಾಗಿ ನುಡಿಯುತ್ತಾರೆ. 'ಅಲಹ' ಎಂದರೆ ಇಲ್ಲಿ ಫಾದರ್ ಕಲ್ಪನೆ ಇದೆ. ಬೈಬಲ್‌ನಲ್ಲಿ ಜೆಹೋವ್ ಎಂದು ಹೆಚ್ಚಾಗಿ ಬಳಸಲಾಗುತ್ತದೆ. ಅದರ ಇನ್ನೊಂದು ರೂಪವೇ ಅಲಹ. ಇವರ ಕಾದಂಬರಿಯಲ್ಲಿ ಆ್ಯನಿ 8 ವರುಷದವಳಾಗಿಯೇ ಉಳಿದಿರುತ್ತಾಳೆ. ಆಕೆ ದೊಡ್ಡವಳಾಗಿ ಬೆಳಯಬಾರದೆಂಬುದೇ ತಮ್ಮ ಪ್ರಾರ್ಥನೆ ಎಂದು ಸಾರಾ ನುಡಿಯುತ್ತಾರೆ..

ಇವರ ಕಾದಂಬರಿಯಲ್ಲಿ ಇವರು 'ಕೊಕ್ಕಂಚಿರ' ಎಂಬ ಸ್ಥಳವನ್ನು ಹೆಚ್ಚು ಪ್ರಮುಖವಾದ ಸ್ಥಳ ಎಂಬಂತೆ ಚಿತ್ರಿಸಿದ್ದಾರೆ. ಈ ಸ್ಥಳದಲ್ಲಿ ಹೆಚ್ಚು ಜನರು ವಾಸವಾಗಿಲ್ಲ. ಕೊಳಕಾಗಿರುವ, ಬೇಡವಾಗಿರುವ ವಸ್ತುಗಳನ್ನು ಎಸೆಯಲು ಇದನ್ನು ಬಳಸಿಕೊಳ್ಳುತ್ತಿದ್ದಾರೆ. ಆದರೂ ಇಲ್ಲಿರುವ ಜನರು ನಗರ ಬೆಳೆಯುತ್ತಿದ್ದಂತೆ ತಿರಸ್ಕೃತರಾದವರು ಎಂಬುದು ಸಾರಾರವರ ಭಾವನೆ. ಅವರು ಅಲ್ಲಿರುವ ಕೊಳಕನ್ನೆಲ್ಲ ಸ್ವಚ್ಛವಾಗಿಸುತ್ತಾ ಬದುಕುತ್ತಾರೆ. ಹಾಗೆ ಸ್ವಚ್ಛ ಗೊಳಿಸಿದ ಮೇಲೆ ಮತ್ತೆ ಅಲ್ಲಿಂದ ಹೊಸದಾದ ಜಾಗಕ್ಕೆ ದಬ್ಬಲ್ಪಡುತ್ತಾರೆ. ಈ ರೀತಿಯ ಜನಕ್ಕೆ ಕೋಪ ಬರುವುದಿಲ್ಲವೇ ? ಕೇರಳದಲ್ಲಿ ಈ ರೀತಿ ಕೊಳಕು, ಕೆಟ್ಟ ವಾತಾವರಣವಿರುವ ಪ್ರದೇಶಗಳಲ್ಲಿ ಬದುಕುವ ಅನೇಕ ಜನರಿದ್ದಾರೆ. ನಗರ ಹೊರವಲಯದಾಚೆ, ಕಾರ್ಖಾನೆಗಳ ಗಡಿಗಳಾಚೆ ಬದುಕುವ ಜನರ, ಅವರಂತರವರ ಸ್ಥಳವಾದ

'ಕೊಕ್ಯಂಚಿರ' ವನ್ನು ಪ್ರಮುಖ ಚಿತ್ರಣವಾಗಿ ಚಿತ್ರಿಸಿದ್ದನ್ನು ಸಾರಾ ವಿವರಿಸುತ್ತಾರೆ.

ಇವರ ಕಾದಂಬರಿಯ ಒಂದು ಪ್ರಮುಖ ಚಿತ್ರಣ ಆ್ಯನಿಯದು. ಈಕೆ ಬೀದಿ ಬದಿಯ ಹುಡುಗಿ. ಆಕೆ ಯಾವಾಗಲೂ ಎಂಟು ವರ್ಷದವಳೇ. ಆಕೆ ಮಿಶ್ರಣವಾದ ಭಾಷೆಯನ್ನು ಮಾತನಾಡುತ್ತಾಳೆ. ಸಾರಾ ಪ್ರಕಾರ ಈಕೆ ಬರಿಯ ಒಂದು ಪಾತ್ರವಲ್ಲ. ಇದು ಮನಸ್ಸೂ ಕೂಡಾ. ಈ ಮನಸ್ಸು ತಾನು ಬದುಕುತ್ತಿರುವ ಸಮಾಜದ ಜೊತೆ ನಿರಂತರವಾಗಿ ಸಂವಾದಿಸುತ್ತಲೇ ಇರುತ್ತದೆ. ಸಂವಾದ ಆಕೆಯ ಚರಿತ್ರೆಯ ಬಗ್ಗೆ, ಅದರೊಳಗಿರುವ ವ್ಯಕ್ತಿಗಳು, ಅವರ ಸಂಬಂಧಗಳು ಹೀಗೆ ಒಬ್ಬರ ಜೊತೆ ನಡೆಯುತ್ತಲೇ ಇರುತ್ತದೆ. ಈ ಸತ್ಯ ಶೋಧನೆಯಲ್ಲಿ ಮಗುವಿನ ಮುಗ್ಧತೆ, ಲಕ್ಷಣಗಳಿವೆ. ಅಂತವರ ಬದುಕಿನ ತಮ್ಮ ಶೋಧನೆಯು ಮಗು ಸತ್ಯಕ್ಕಾಗಿ ಹುಡುಕುವ ರೀತಿಯದಾಗಿರಬೇಕು ಎನ್ನುವ ದೆಸೆಯಲ್ಲಿ ಆ್ಯನಿ ಕಾದಂಬರಿಯಾದಕ್ಕೂ ಎಂಟು ವರುಷದವಳಾಗಿಯೇ ಕಾಣಿಸಿಕೊಳ್ಳುತ್ತಾಳೆ ಎಂದು ಸಾರಾ ನುಡಿಯುತ್ತಾರೆ.

ಹಾಗೆಂದು 8 ವರುಷದ ಮಗುವಿನ ಮನಸ್ಸು-ಕಾದಂಬರಿ ಕಾರ್ತಿಯ ಮನಸ್ಸು ಒಂದೇ ಬಗೆಯದು ಅಥವಾ ಒಂದೇ ರೀತಿಯದು ಎಂದಲ್ಲ. ಹಾಗಿರುವ ಅಗತ್ಯವೂ ಇಲ್ಲ. ಆ್ಯನಿಯ ಪಾತ್ರದಲ್ಲಿ - ಆಕೆ ತನ್ನ ಸುತ್ತಲಿನ ಬದುಕನ್ನು ನೋಡುತ್ತಾಳೆ, ಅದರ ಚರಿತ್ರೆಯನ್ನು ಬಗೆಯಲಿಚ್ಛಿಸುತ್ತಾಳೆ. ಪೂರ್ವ ಗ್ರಹಗಳಿರದ ಮಗುವಿನ ಕುತೂಹಲ, ಶೋಧನೆಯ ಮನಸ್ಸು - ಲೇಖಕರಿಗೆ ಕೂಡಾ ಅಗತ್ಯ ಎಂದು ಸಾರಾ ನುಡಿಯುತ್ತಾರೆ.

ಇವರ ಪಾತ್ರಗಳು ಸಂಪೂರ್ಣವಾಗಿ ಕಾಲ್ಪನಿಕವಾದವುಗಳಲ್ಲ. ಆದರೆ ಒಂದು ಮಟ್ಟದ ಕಲ್ಪನೆ - ವಾಸ್ತವದ ಜೊತೆಗೆ ಹೆಣಿಕೆ ಹಾಕಿಕೊಂಡಿದೆ.

ಹಲವಾರು ಪಾತ್ರಗಳು ಇವರ ಪರಿಚಯದವು, ಇವರು ಭೇಟಿಯಾದಂತವುಗಳು. ಆದರೆ ಇವರು ಹೆಸರು ಬದಲಾಯಿಸಿದ್ದಾರೆ. ಹಾಗೆಯೇ ಸ್ಥಳಗಳೂ ಕೂಡಾ ಇವರಿಗೆ ಹೆಚ್ಚು ಪರಿಚಯವಿರುವವೇ.

ಇವರು 'ಅಲಾ ಹಯುಧೆ ಪೆನ್‌ಮಕ್ಕಲ್' ಕಾದಂಬರಿ ಬರೆಯುವಾಗ, ಚಾರಿತ್ರಿಕ ವಿಚಾರ ಕಲೆ ಹಾಕುವಾಗ ಸಾಕಷ್ಟು ಶ್ರಮ ವಹಿಸಿದ್ದರು. ಹಾಗೂ ಭಾಷೆಯ ಬಗ್ಗೆ ಸಹ ಚಿಕ್ಕವರಿರುವಾಗ ಇವರ ಹುಟ್ಟೂರಾದ ತ್ರಿಶೂರ್‌ನ ಭಾಷೆ, ಡಯಲೆಕ್ಟ್ ಗೊತ್ತಿತ್ತು. ಆದರೆ ಹದಿನೈದನೆಯ ವಯಸ್ಸಿನಲ್ಲಿಯೇ ಇವರು ಮದುವೆಯಾಗಿ ಆ ಸ್ಥಳ ಬಿಡುವಂತಾಯಿತು. ಹಾಗಾಗಿ ಇವರ ಭಾಷೆಯಲ್ಲಿ ಅನೇಕಾನೇಕ ಬದಲಾವಣೆಗಳು ನಡೆದವು. ಅವರಿಗೆ ಆ ಸ್ಥಳದ ಡೈಲೆಕ್ಟ್ ಗೊತ್ತಿದ್ದರೂ ಅದರ ಬಳಸುವಿಕೆ, ಲಯಗಳು ಸಂಪೂರ್ಣವಾಗಿ ಮರೆತು ಹೋಗಿದ್ದವು. ಕಾದಂಬರಿ ಬರೆಯುವಾಗ ಇದೆಲ್ಲವನ್ನು ತಿರುಗಿ ನೆನಪಿಸಿಕೊಳ್ಳುವುದು, ಹೊಂದಿಸಿಕೊಳ್ಳುವುದು ಕಷ್ಟದ ಕೆಲಸವಾಗಿತ್ತು. ಅವರ ಮೊದಲ ಎರಡು ಅಧ್ಯಾಯದಲ್ಲಿ ಎಲ್ಲವನ್ನು ಅಥೆಂಟಿಕ್ ಆಗಿ ಬರೆಯುವುದು ಕಷ್ಟವಾಗಿತ್ತು. ಆದರೆ ನಂತರದಲ್ಲಿ ಸುಪ್ತ ಪ್ರಜ್ಞೆಯ ಅಡಿಯಲ್ಲಿ ಎಲ್ಲೋ ಹುದುಗಿದ್ದು ನೀರಿನ ಚಿಲುಮೆಯಂತೆ ಉಕ್ಕಿ ಹರಿಯತೊಡಗಿತ್ತು. ರೈಲುಗಳಲ್ಲಿ ಪ್ರಯಾಣಿಸುವಾಗ ತ್ರಿಶೂರ್ ಜನ ಮಾತನಾಡುವುದನ್ನು ಆಲಿಸುತ್ತಿದ್ದರು. ಅವರ 'ಪದಗಳನ್ನು', ಕೆಲವೊಮ್ಮೆ ಅವರ ಸಂಪೂರ್ಣ ಮಾತನ್ನೋ ನಕಲು ಮಾಡುತ್ತಿದ್ದರು. ಮದುವೆಯಂತಹ ಸಮಾರಂಭಕ್ಕೆ ಹೋದಾಗ ಕೂಡಾ ಇದನ್ನೇ ಮಾಡುತ್ತಿದ್ದರು.

ವಯಸ್ಸಾದ ಮಹಿಳೆಯರು ಮಾತನಾಡತ್ತಿದ್ದುದೆಲ್ಲವನ್ನು ಇವರು ಟೇಪ್ ಮಾಡುತ್ತಿದ್ದರು. ಜೊತೆಗೆ ಇವರ ಸ್ನೇಹಿತರ, ಸಂಬಂಧಿಗಳ ಜೊತೆಗಿನ ಮಾತು-ಕತೆಯಲ್ಲಿ 'ಸ್ಲ್ಯಾಂಗ್' ಪದಗಳನ್ನು ಸಹ ಸಂಗ್ರಹಿಸುತ್ತಿದ್ದರು. ಕೆಲವಾರು ದಿನಗಳಲ್ಲಿಯೇ ಇವರು ಕಾದಂಬರಿಗೆ ಬೇಕಾದ ಭಾಷೆಯ ಬಗ್ಗೆ ಹಿಡಿತ ಸಾಧಿಸಿದ್ದರು. ಕಾದಂಬರಿ ಬರೆಯುವಾಗ ಇದು ಅವರ ಮೊದಲ ಹೆಜ್ಜೆ ಆಗಿತ್ತು. ನಂತರದ ಹೆಜ್ಜೆ ಚಾರಿತ್ರಿಕ ಅಂಶಗಳನ್ನು ಶೇಖರಿಸುವುದಾಗಿತ್ತು. ಇತಿಹಾಸವೆಂದರೆ - ಇದು ರಾಜಕೀಯವನ್ನೂ ಒಳಗೊಂಡಂತೆ. ಇತಿಹಾಸವೆಂದರೆ ಇದು ತ್ರಿಶೂರ್‌ನ ನಿರ್ದಿಷ್ಟ ಇತಿಹಾಸವಾಗಿತ್ತು. ಇದೆಲ್ಲವನ್ನೂ ಜನರ ಮೌಖಿಕ ಕಥೆಗಳಿಂದ ಇವರು ಸಂಗ್ರಹಿಸಿದ್ದರು.

ಭಾಷೆಯ ಬಳಕೆಯಲ್ಲಿ ಸಾರಾ ಸಾಕಷ್ಟು ಪ್ರಜ್ಞಾ ಪೂರ್ವಕ ಕೆಲಸಗಳನ್ನು ಮಾಡಿದ್ದಾರೆ. ಯಾವುದೇ ಭಾಷೆ ಅಥವಾ ಪದ ನಮ್ಮ ವಿರುದ್ಧ ಇದೆ ಎಂದರೆ ಅದರ ಬಳಕೆಯನ್ನು ಬಿಡಬೇಕು. ಏಕೆಂದರೆ ಆ ಭಾಷೆ ನಮ್ಮ ವಿಚಾರಧಾರೆಗೆ ವಿರುದ್ಧವಾಗಿರುತ್ತದೆ. ಉದಾಃ ಹೆಂಗಸರಿಗೆ ವಿರುದ್ಧವಾದ ಸಂಸ್ಕೃತ ಪದವನ್ನು ಸಾರಾ ಬಳಸುವುದಿಲ್ಲ. ಅಂದರೆ ಬಳಕೆಯನ್ನು, ಮೌಲ್ಯ ಎಂದು ಕೊಂಡುದನ್ನು ಮುರಿಯುವುದು. ಹೀಗೆಯೇ ನೊಂದವರಿಗೆ, ಬದಕಲು ಹೋರಾಡುವವರ ವಿರುದ್ಧ ಇರುವ ಭಾಷೆಯ ಬಳಕೆಯನ್ನು ಮುರಿಯುವುದು.

ಈ ರೀತಿಯ ಪದಗಳು ಸಂಸ್ಕೃತದಲ್ಲಿ ಮಾತ್ರ ಇವೆಯೆಂದಲ್ಲ. ಮಲೆಯಾಳಂನಲ್ಲಿ 'ಅವನಪ್‌ನ್' ಪದ ಇದೆ. ಇದರಲ್ಲಿ ಪುರುಷನ ನಾಮ ಸೂಚಕ ಇದ್ದರೂ ಮಹಿಳೆಯ ವಿರೋಧಿ ಪದ. ಈ ರೀತಿಯ ಪದಗಳನ್ನು ಯಾವುದೇ ಅರ್ಥವಂತಿಕೆ ನಷ್ಟವಾಗದ

ಹಾಗೆ ನಾವು ಕೈ ಬಿಡಬಹುದಾಗಿದೆ ಎಂದು ಸಾರಾ ಜೋಸೆಫ್ ನುಡಿಯುತ್ತಾರೆ.

ಸಾರಾರವರ ಪ್ರಕಾರ ಇಡಿಯ ಮಾನವ ಜನಾಂಗದ ಬದುಕು ಅವರ ಭಾಷೆಯಲ್ಲಿ ವ್ಯಕ್ತವಾಗುತ್ತದೆ. ಸಮಾಜದ ವಿರೋಧಾಭಾಸಗಳು ಹಾಗೂ ಸಂಘರ್ಷಗಳು ಪದಗಳಲ್ಲಿ ಹಾಗೂ ಬಳಕೆಗಳಲ್ಲಿ ವ್ಯಕ್ತವಾಗುತ್ತವೆ. ಸಮಾಜದಲ್ಲಿ ವರ್ಗ ವಿಭಾಗಗಳಿದ್ದರೆ, ಭಾಷೆಯು ವರ್ಗ-ವಿಭಾಗಗಳನ್ನು ತೋರಿಸುತ್ತದೆ. ಸಮುದಾಯದಲ್ಲಿ ಲಿಂಗ - ಅಸಮಾನತೆಗಳಿದ್ದರೆ ಭಾಷೆಯು ಲಿಂಗ ಅಸಮಾನತೆಗಳನ್ನು ಸೂಚಿಸುತ್ತದೆ. ಒಂದು ಭಾಷೆಯನ್ನು ಕುರಿತು ಅಧ್ಯಯನ ನಡೆಸಿದರೆ, ಒಂದು ಸಮುದಾಯವನ್ನು ಕುರಿತು ಅಧ್ಯಯನ ನಡೆಸಿದಂತೆ ಎಂದು ಸಾಮಾಜಿಕ-ಭಾಷೆ ತಜ್ಞರು ಅಭಿಪ್ರಾಯ ಪಡುತ್ತಾರೆ. ಮಲೆಯಾಳಂನಲ್ಲಿ ಉಷಾ ನಂಬೂದರಿಯವರ ಪುಸ್ತಕ 'ಸೋಷಿಯೋ - ಲಿಂಗ್ವಿಸ್ಟಿಕ್ಸ್' ಸಮಾಜದಲ್ಲಿರುವ ಜಾತಿಯ ವಿರೋಧಾಭಾಸಗಳನ್ನು ಎತ್ತಿ ತೋರಿಸುತ್ತದೆ.

ಅಸಮಾನತೆ ಇರುವ ಸಮಾಜದಲ್ಲಿ ಮೇಲುಗೈ ಹೊಂದಿರುವ ವರ್ಗ ಭಾಷೆಯೊಂದನ್ನು ಹುಟ್ಟು ಹಾಕುತ್ತದೆ. ಶೋಷಿತ ವರ್ಗವನ್ನು ಬಯ್ಯುವ ಭಾಷೆಯಲ್ಲಿಯೇ ಸೃಷ್ಟಿಸುತ್ತದೆ. ಕಾಲಾನುಕ್ರಮದಲ್ಲಿ ಶೋಷಿತ ವರ್ಗದವರು ಆ ಭಾಷೆಯನ್ನು ತಮ್ಮ ಪದಗಳ ಬಳಕೆಯಲ್ಲಿ ಬಳಸುತ್ತಾರೆ. ಉದಾಹರಣೆಗೆ ಥೆಂಡಿ ಎನ್ನುವ ಪದ ಭಿಕ್ಷುಕ ಎಂಬುದನ್ನು ಸೂಚಿಸುತ್ತದೆ. ಇದು ಆರ್ಥಿಕ ಅಸಮಾನತೆಯಿಂದ ಉಂಟಾದ ಸಾಮಾಜಿಕ ಪರಿಸ್ಥಿತಿ. ಇಲ್ಲಿ ಕೆಲವರು ಭಿಕ್ಷುಕರಾಗಿಯೇ ತಮ್ಮ ಬದುಕನ್ನು ನಡೆಸಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ 'ಭಿಕ್ಷುಕ' ಎಂಬುದು ಒಂದು ಬಯ್ಯುವ ಪದವಾಗಿರುತ್ತದೆ. ಇದು 'ಒರುಂಪೆಚ್ಚೋಲ್' ಎನ್ನುವ ಪದಕ್ಕೂ ಸಂಬಂಧ ಪಡುತ್ತದೆ. 'ಒರುಂಪೆಚ್ಚೋಲ್' ಎಂದರೆ ಧಿಮಾಕಿನ ಹೆಂಗಸು ಎಂದು ಅರ್ಥ. ಇದು ಹೆಂಗಸರ ವಿರೋಧಿ ಪದವಾಗಿದೆ. ಈ ಸಮಾಜದ ನೀತಿ-ನಿಯಮುಗಳಿಗೆ, ನೀತಿ - ಸಂಹಿತೆ ಕುರಿತಾದ್ದು. ಆದರೆ 'ಒರುಂಪೆಚ್ಚಾನ್' ಎನ್ನುವ ಪದವೇ ಇಲ್ಲ - ಪುರುಷರ ನೈತಿಕ ಸ್ಥಾನ-ಮಾನ ಕುರಿತು ಹೇಳುವಂತಾದ್ದು. ಈ ರೀತಿಯ ಪದಗಳ ಬಳಕೆಯಿಂದ ಕೋಪ ಅಥವಾ ರೋಷವನ್ನು ಅಭಿವ್ಯಕ್ತಿಗೊಳಿಸಲಾಗುತ್ತದೆ. ಈ ರೀತಿ ಪದ ಬಳಕೆಗಳು ಹೆಂಗಸರು, ಜಾತಿ ಹಾಗೂ ಬಡತನದ ವಿರೋಧಿ ಪದಗಳಾಗಿರುತ್ತವೆ. ಆದರೆ ಅಭಿವ್ಯಕ್ತಿಗಾಗಿ ಇವುಗಳನ್ನು ಬಳಸಲೇ ಬೇಕು ಎನ್ನುವ ನಿಯಮವೇನೂ ಇಲ್ಲ ಎಂದು ಸಾರಾ ಜೋಸೆಫ್ ಅಭಿಪ್ರಾಯ ಪಡುತ್ತಾರೆ.

ಸಾರಾ ಎಂ.ಎ. ಮಾಡುವಾಗ ಸಿ.ಎಲ್ ಆ್ಯಂಥೋನಿ ಮಾಸ್ಟರ್ ಕೂಡಾ ಇವರಿಗೆ ನೆರವು ನೀಡಿದ್ದರು. ಇವರ ಬರಹಗಳ ಪ್ರಯತ್ನವನ್ನು ಅವರು ಬಹುವಾಗಿ ಮೆಚ್ಚಿದ್ದರು. ಒಮ್ಮೆ ಅವರು ಸಾರಾರವರಿಗೆ ಆಕೆ ಉತ್ತಮ ಕ್ರಿಶ್ಚಿಯನ್ ಆಗಲು ಇಷ್ಟ ಪಡುತ್ತಾರೋ ಅಥವಾ ಉತ್ತಮ ಬರಹಗಾರ್ತಿಯಾಗಲು ಇಷ್ಟ ಪಡುತ್ತಾರೋ ? ಎಂದು ಕೇಳಿದ್ದರು. ಉತ್ತಮ ಕ್ರಿಶ್ಚಿಯನ್ ಆಗಲು ಇಷ್ಟಪಟ್ಟರೆ ಆಕೆ ಒಳ್ಳೆಯ ಬರಹಗಾರ್ತಿಯಾಗಲಾರಳೆಂದೂ, ಅಥವಾ ಉತ್ತಮ ಬರಹಗಾರ್ತಿಯಾಗ ಬಯಸಿದರೆ ಉತ್ತಮ ಕ್ರಿಶ್ಚಿಯನ್ ಆಗಲಾರಳೆಂದೂ ಹೇಳಿದ್ದರು. ಎರಡೂ ಒಟ್ಟಿಗೇ ಆಗಲಿಕ್ಕೆ ಸಾಧ್ಯವಿಲ್ಲ. ಯಾವುದಾದರೂ ಒಂದನ್ನು ಬಿಡಲೇ ಬೇಕಾಗುತ್ತದೆ ಎಂದು ಸಿ.ಎಲ್. ಆ್ಯಂಥೋನಿ ಮಾಸ್ಟರ್ ಸಾರಾರವರಿಗೆ ಹೇಳಿದ್ದರು.

ಆನಂತರದಲ್ಲಿ ಆ್ಯಂಥೋನಿ ಮಾಸ್ಟರ್ ತಾವು ಅಂತಹ ಕಷ್ಟಕರ ಸನ್ನಿವೇಶದಲ್ಲಿ ಇಲ್ಲ ಎಂದು ನುಡಿದಿದ್ದರು. ಆ ಸಮಯದಲ್ಲಿ ಅವರು ಒಂದು ಬಿಡಿ ಭಾಗಗಳ ಜೋಡಿಸುವ ಅಂಗಡಿ ನಡೆಸುತ್ತಿದ್ದರು. ಅವರದು ಭಾಷಾ ವಿಜ್ಞಾನ . ಅವರು ನುಡಿದಿದ್ದರು, "ನಾನು ಭಾಷಾ ವಿಜ್ಞಾನಿ. ಸಾಮಾನುಗಳನ್ನು ಹೇಗೆ ಜೋಡಿಸಬೇಕೆಂಬುದು ನನಗೆ ತಿಳಿದಿದೆ. ಭಾಷೆಯ ವಿಷಯದಲ್ಲಿಯೂ ನನ್ನ ಕೆಲಸ ಇದೇ ತರಹದು. ನಿನ್ನ ವಿಚಾರ ಹಾಗಲ್ಲ. ನಿನ್ನದು ಸೃಜನಶೀಲಾತ್ಮಕ ಬರಹ. ಸೃಜನಶೀಲಾತ್ಮಕ ಬರಹದಲ್ಲಿ, ನೀನು ನಿಜ ನುಡಿಯಬೇಕೆಂದರೆ, ಅನಿವಾರ್ಯವಾಗಿ ನೀನು ಧರ್ಮದ ಜೊತೆ ಸಂಘರ್ಷವನ್ನು ಹೊಂದಬೇಕಾಗುತ್ತದೆ."

ಸಿ.ಎಲ್.ಆ್ಯಂಥೋನಿ ಮಾಸ್ಟರ್ ಸಾರಾರವರಿಗೆ ಹೇಳಿದ ಮಾತನ್ನು ಸಾರಾ ಜೋಸೆಫ್ ಅಕ್ಷರಶಃ ಒಪ್ಪುತ್ತಾರೆ. ಧರ್ಮವೇನೂ ಅವರನ್ನು ವಿರೋಧಿಸಿಲ್ಲ. ಆದರೆ ಸಾಂಸ್ಥಿಕ ರೂಪ ಹೊಂದಿದ ಧರ್ಮವನ್ನು ಎದುರಿಸದೇ ಮುಂದೆ ಒಂದು ಹೆಜ್ಜೆ ಇಡಲೂ ಸಾಧ್ಯವಿಲ್ಲವೆಂದು ಈಕೆ ನುಡಿಯುತ್ತಾರೆ. ಧರ್ಮ ಇಲ್ಲಿಯವರೆಗೆ ಅವರನ್ನು ವಿರೋಧಿಸುವುದಾಗಲೀ ಅಥವಾ ಬೆಂಬಲಿಸುವುದಾಗಲೀ ಮಾಡಿಲ್ಲ. ಹಾಗೆ ವಿರೋಧಿಸಿದ್ದಾಗ್ಯೂ ತಾವು ಅದಕ್ಕೆ ಮನ್ನಣೆ ನೀಡುವ ದಿಲ್ಲವೆಂದು ಸಾರಾ ಜೋಸೆಫ್ ನುಡಿಯುತ್ತಾರೆ.

ಸಂದರ್ಶನ - ಗೀತಾ ಹರಿಹರನ್

**From - Just Between us.**

**Edited by -** Ammu Joseph, Vasantha Kannabiran, Ritu Menon, Gowri Selvi, Volga.

# ಹಿಂದೂ ಉತ್ತರಾಧಿಕಾರ ಮಸೂದೆ - ಒಂದು ಚಾರಿತ್ರಿಕ ನೋಟ

2005 ರ ಆಗಸ್ಟ್ ತಿಂಗಳಲ್ಲಿ ಮುಕ್ತಾಯವಾದ ಸಂಸತ್ತಿನ ಮುಂಗಾರು ಅಧಿವೇಶನದಲ್ಲಿ 2004ರ ಹಿಂದೂ ಉತ್ತರಾಧಿಕಾರ ತಿದ್ದುಪಡಿ ಮಸೂದೆಯನ್ನು ನಮ್ಮ ಸಂಸತ್ತು ಅಂಗೀಕರಿಸಿದೆ. 40 ರ ದಶಕದಲ್ಲಿಯೇ ವಿವಾಹ ಹಾಗೂ ಉತ್ತರಾಧಿಕಾರ ಕಾನೂನಿಗೆ ಸುಧಾರಣೆ ತರಲು ಅಂಬೇಡ್ಕರ್ ಶ್ರಮಿಸಿ ಹಿಂದೂ ಕೋಡ್ ಬಿಲ್ ಮಂಡಿಸಿದ್ದರು. ಆದರೆ ಅದು ಅಂಗೀಕಾರ ಪಡೆಯಲೇ ಇಲ್ಲ. ಏಕೆಂದರೆ ಸಮಾನತೆಯ ಸಮಾಜವನ್ನು ಸೃಷ್ಟಿಸುವ ಹಾದಿ ಯಾವಾಗಲೂ ಕ್ಲಿಷ್ಟಕರವಾದ ಪ್ರಕ್ರಿಯೆಯಾಗಿಯೇ ನಮ್ಮ ಸಮಾಜದಲ್ಲಿ ನಡೆದು ಬಂದಿದೆ. ಇತಿಹಾಸದ ಪುಟಗಳತ್ತ ಕಣ್ಣು ಹಾಯಿಸುವ ಈ ಘಟನಾವಳಿಗಳನ್ನು ಗೇಲ್ ಓವೆಟ್ ಈ ಬರಹದಲ್ಲಿ ಮೂಡಿಸಿದ್ದಾರೆ.

ಏಕರೂಪ ನಾಗರೀಕ ಸಂಹಿತೆ ಜಾರಿಯಾಗಬೇಕೆಂಬ ವಾದವಿವಾದಗಳು ಇತ್ತೀಚಿನ ದಿನಗಳಲ್ಲಿ ಸಾಕಷ್ಟು ನಡೆಯುತ್ತಲೇ ಇದೆ. ಬಿಜೆಪಿಯಂತೂ ಈ ಬೇಡಿಕೆಯನ್ನು ಪುನರುಚ್ಚರಿಸುತ್ತಲೇ ಇದೆ. ಈ ಸಂಬಂಧದಲ್ಲಿ, ಇತಿಹಾಸದಲ್ಲಿ ಹುದುಗಿ ಹೋಗಿರುವ ಕೆಲವು ಸಂಗತಿಗಳನ್ನು ಪರಿಶೀಲಿಸಬಹುದು. 1950ರ ದಶಕದಲ್ಲೇ ಅಂದಿನ ಕಾನೂನು ಸಚಿವ ಡಾ ಬಿ ಆರ್ ಅಂಬೇಡ್ಕರ್ ಅವರು ಮೊದಲ ಸ್ವತಂತ್ರ ಸಂಸತ್ತಿನ ಮುಂದೆ ಮೂಲ ಹಿಂದೂ ಕೋಡ್ ಮಸೂದೆ (ಬಿಲ್) ಯನ್ನು ಮಂಡಿಸಿದ್ದರು. ಇದು ವಿವಾಹ ಹಾಗೂ ಉತ್ತರಾಧಿಕಾರದ ಬಗೆಗಿನ ಮೊದಲ ಸುಧಾರಿತ ಕಾನೂನಾಗಿತ್ತು ಎಂಬುದನ್ನು ನಾವು ಮರೆಯಲಾಗದು.

ಸಾಮಾಜಿಕ ಸುಧಾರಣೆ ಹಾಗೂ ಕ್ರಾಂತಿಯ ಎರಡು ಪ್ರಮುಖ ಅಲೆಗಳ ಅಂತಿಮ ರೂಪವಾಗಿತ್ತು ಈ ಮಸೂದೆ. ಮೊದಲನೆಯದು 19ನೇ ಶತಮಾನದಲ್ಲಿ ಆರಂಭವಾದ ಮೇಲ್ಜಾತಿ ಸಾಮಾಜಿಕ ಸುಧಾರಣೆ. ಆಗ ಸುಧಾರಕರು ಬಾಲ್ಯ ವಿವಾಹ ನಿಯಂತ್ರಣ, ವಿಧವಾ ಮರು ವಿವಾಹ ಹಾಗೂ ಅಸಮರ್ಥ ಅಥವಾ ದೌರ್ಜನ್ಯ ನಡೆಸುವ ಪತಿಯಿಂದ ವಿಚ್ಛೇದನವಲ್ಲದಿದ್ದರೂ ಬೇರ್ಪಡುವುದಕ್ಕಾಗಿ ಕಾನೂನುಗಳ ಬದಲಾವಣೆಗೆ ಒತ್ತಾಯಿಸಿದ್ದರು. ಇದು ಕಡೆಗೆ ಪುನರ್ವಿಮರ್ಶಿತ ಹಿಂದೂ ಕಾನೂನು ಬೇಕು ಎಂದು 'ಆಲ್ ಇಂಡಿಯಾ ವಿಮೆನ್ಸ್ ಕಾನ್ಫರೆನ್ಸ್' ಪಟ್ಟು ಹಿಡಿದು ಬೇಡಿಕೆ ಮಂಡಿಸಲು ಕಾರಣವಾಯಿತು.

ಎರಡನೆಯ ಅಲೆ ಆರಂಭವಾದದ್ದು 1926ರಲ್ಲಿ. ಮಹಾರಾಷ್ಟ್ರದ ಕೊಂಕಣ ವಲಯದ ಮಹಾಡ್‌ನಲ್ಲಿ ಕೆರೆಯಿಂದ ನೀರು ತೆಗೆದುಕೊಳ್ಳಲು ಅಸ್ಪೃಶ್ಯರಿಗೂ ಹಕ್ಕು ಇದೆ ಎಂಬ ಚಳವಳಿ ಆಗ ಆರಂಭವಾಯಿತು. ಆಗ ಅಂಬೇಡ್ಕರ್ ಅವರು ಮನುಸ್ಮೃತಿಯ ಪ್ರತಿಯನ್ನು ಸುಟ್ಟು ಘಟನೆಗೆ ನಾಟಕೀಯ ಆಯಾಮವನ್ನು ನೀಡಿದ್ದರು. ಆ ನಂತರ ಅವರು ಮಹಿಳೆಯರು ಹಾಗೂ ಶೂದ್ರರ ಮೇಲೆ ಗುಲಾಮತನವನ್ನು ಮರು ವಿಧಿಸಿದ 'ಪುರಾತನ ಭಾರತದ ಕ್ರಾಂತಿ ಹಾಗೂ ಪ್ರತಿಕ್ರಾಂತಿ'ಯ ಬಗ್ಗೆ ನಿರಂತರವಾಗಿ ಬರೆದರು. ಭಾರತಕ್ಕೆ ಹೊಸ ರಾಜಕೀಯ ಸ್ವರೂಪವನ್ನು ನೀಡಿದ ಸಂವಿಧಾನವನ್ನು ರೂಪಿಸಿದ ನಂತರ, ಸಂಬಂಧ, ವಿವಾಹ ಹಾಗೂ ಉತ್ತರಾಧಿಕಾರದ ಹೊಸ ಸಾಮಾಜಿಕ ಸ್ವರೂಪದ ಆರಂಭವನ್ನು ತಮ್ಮ ಜನರಿಗೆ ನೀಡಲು ಅಂಬೇಡ್ಕರ್ ಯತ್ನಿಸಿದ್ದರು.

ಆದರೆ ಸಂವಿಧಾನದ ವಿಚಾರಕ್ಕಿಂತ ಹಿಂದೂ ಕೋಡ್ ಬಿಲ್ ವಿಧಿಯೇ ಬೇರೆಯದಾಗಿತ್ತು. ಏನೇ ಜಗಳ ಭಿನ್ನಾಭಿಪ್ರಾಯಗಳಿದ್ದರೂ ಸಂವಿಧಾನವನ್ನು ವ್ಯವಸ್ಥಿತವಾಗಿ ಮುಂದಕ್ಕೊಯ್ಯಲಾಯಿತು. ವಿವಾದತ್ಮಕ ವಿಚಾರಗಳನ್ನು ಕೈಗೆತ್ತಿಕೊಂಡು ಚರ್ಚಿಸಿ ಅಂಗೀಕರಿಸಲಾಗುತ್ತಿತ್ತು ಅಥವಾ ಕೈ ಬಿಡಲಾಗುತ್ತಿತ್ತು. ರಾಜಕೀಯ ಪ್ರಜಾಸತ್ತೆ ಮೂಲಭೂತ ಅಂಶಗಳ ಬಗ್ಗೆ ಹೆಚ್ಚಿನ ಭಿನ್ನಾಭಿಪ್ರಾಯಗಳೇನೂ ಇರಲಿಲ್ಲ. ಆದರೆ ಕುಟುಂಬ ಹಾಗೂ ಸಮಾಜ ಸುಧಾರಣೆಯ ವಿಚಾರದಲ್ಲಿ ಮಾತ್ರ ಗಂಭೀರ ಭಿನ್ನಾಭಿಪ್ರಾಯಗಳಿದ್ದವು.

ಹೀಗಾಗಿ ಹಿಂದೂ ಕೋಡ್ ಮಸೂದೆಯನ್ನು ಆರಂಭದಿಂದಲೇ ತಡೆ ಹಿಡಿಯಲಾಯಿತು. ಇದು ನೇರ ಹುಟ್ಟು ಪಡೆದಿದ್ದು 1941 ರಲ್ಲಿ, ಆಗ ಪುನರ್ವಿಮರ್ಶಿತ ಕಾನೂನುಗಳ ಕರಡು ತಯಾರಿಸಲು ಸರ್ಕಾರಿ ಸಮಿತಿಯನ್ನು ರಚಿಸಲಾಯಿತು. ಇದು 1943 ರಲ್ಲಿ ಎರಡು ಕರಡು ಮಸೂದೆಗಳನ್ನು ರೂಪಿಸಿತು. ಇದರಲ್ಲಿ ಒಂದು ಉತ್ತರಾಧಿಕಾರವನ್ನು ಕುರಿತ ಮಸೂದೆಯಾಗಿತ್ತು. ಮತ್ತೊಂದು ವಿವಾಹವನ್ನು ಕುರಿತದ್ದಾಗಿತ್ತು. ಸಂಸತ್ತಿನಲ್ಲಿ ನಡೆದ ಮೊದಲ ಚರ್ಚೆಗಳ ನಂತರ, ಇವುಗಳನ್ನು ಒಟ್ಟುಗೂಡಿಸಲು ಬಿ.ಎನ್. ರಾವ್ ಅಧ್ಯಕ್ಷತೆಯ ತಜ್ಞರ ತಂಡಕ್ಕೆ ವಾಪಸ್ ಕಳಿಸಲು ನಿರ್ಧರಿಸಲಾಯಿತು. ಇದೇ ಕರಡು ಮಸೂದೆಯನ್ನೇ ಸ್ವತಂತ್ರ ಭಾರತದ ಮೊದಲ ಸಂಸತ್ತಿನಲ್ಲಿ 1947ರ ಏಪ್ರಿಲ್ ತಿಂಗಳಲ್ಲಿ ಕಾನೂನು ಸಚಿವರಾಗಿ ಅಂಬೇಡ್ಕರ್ ಮಂಡಿಸಿದರು. ಈ ಕರಡು ಪ್ರತಿಯಲ್ಲಿ ಅಂಬೇಡ್ಕರ್ ಅವರೇ ಸ್ವತಃ ಕೆಲವು ಮುಖ್ಯ ಬದಲಾಣೆಗಳನ್ನೂ ಮಾಡಿದರು. ಸುಧಾರಿತ ಉತ್ತರಾಧಿಕಾರ ಕಾನೂನಿಗೆ ದಯಾಭಾಗ ಪಾರಂಪರಿಕ ವ್ಯವಸ್ಥೆಯನ್ನು ಆಧಾರವಾಗಿ ರೂಪಿಸಿದರು. (ಇದರಲ್ಲಿ ವ್ಯಕ್ತಿಗತ ಉತ್ತರಾಧಿಕಾರಿಗಳಿಗೆ ಪೂರ್ಣ ಶಾಸನಾತ್ಮಕ ಆಸ್ತಿ ಹಕ್ಕುಗಳಿವೆ). ವ್ಯಕ್ತಿಗತ ಹಕ್ಕು ಪ್ರತಿಪಾದನೆಗಳು 'ಸಹಪಾಲುದಾರ' ಮಿತಿಗಳಿಗೆ ಒಳಪಡುವ 'ಮಿತಾಕ್ಷರ' ಪದ್ಧತಿಯನ್ನು ಅಂಬೇಡ್ಕರ್ ಆಯ್ಕೆ ಮಾಡಲಿಲ್ಲ.

ಈ ಸಂಬಂಧದಲ್ಲಿ ನಡೆದ ಸಂಸದೀಯ ಚರ್ಚೆಗಳು ಕುತೂಹಲಕಾರಿಯಾಗಿವೆ. ಏಕೆಂದರೆ ಅದದೇ ವಿಚಾರಗಳೇ ಬಹಳಷ್ಟು ಸಲ ಕೇಳಿ ಬರುತ್ತದೆ. (ಮಹಾರಾಷ್ಟ್ರ ಸರ್ಕಾರ

ಪ್ರಕಟಿಸಿರುವ ಅಂಬೇಡ್ಕರ್ ಅವರ ಬರಹಗಳು ಭಾಷಣಗಳು ಸಂಪುಟ 14 ರಲ್ಲಿ ಈ ಚರ್ಚೆಗಳು ಒಳಗೊಂಡಿವೆ). ಸಂಪ್ರದಾಯವಾದಿಗಳಂತೂ ವಿಶೇಷವಾಗಿ ಹಿಂದೂ ವಿವಾಹಕ್ಕಿರುವ ಪವಿತ್ರ ಸ್ವರೂಪವನ್ನು ಒತ್ತಿ ಹೇಳಿದ್ದಾರೆ. ಅದರ ಬಿಡಿಸಲಸಾಧ್ಯವಾದ, ವಿಚ್ಛೇದನ ಅಸಾಧ್ಯವಾಗಿಸುವ ರೀತಿಯೇ ಹಿಂದೂ ಸಮಾಜದ ನಿಜವಾದ ನೆಲೆಗಟ್ಟು ಎಂದು ಸದಸ್ಯರುಗಳು ವಾದಿಸಿದ್ದಾರೆ. ಬಹುತೇಕ ಮಂದಿ ಅದನ್ನು ವಿರೋಧಿಸುತ್ತಾರೆ ಅಥವಾ ಅದರ ಬಗ್ಗೆ ಅವರಿಗೆ ಗೊತ್ತಿಲ್ಲ ಎಂಬೆಲ್ಲಾ ವಾದಗಳೂ ದಾಖಲಾಗಿವೆ. ಮುಸ್ಲಿಮರನ್ನೂ ಒಳಗೊಳ್ಳುವ ಸಮಾನ ನಾಗರೀಕ ಸಂಹಿತೆ ಇಲ್ಲದೆ ಹಿಂದೂಗಳು ಮತ್ತಿತರರಿಗೆ (ಮಸೂದೆಯಲ್ಲಿ ಬೌದ್ಧರು, ಜೈನರು ಮತ್ತಿತರರನ್ನು ಒಳಗೊಳ್ಳಲಾಗಿತ್ತು. ಆದರೆ ಅವರನ್ನು 'ಹಿಂದೂ ಧರ್ಮ'ದ ಭಾಗವೆಂದೂ ಗುರುತಿಸಿರಲಿಲ್ಲ.) ಯಾವುದೇ ಕಾನೂನು ಮಾಡಬಾರದು ಎಂದು ಅವರು ನಿರಂತರವಾಗಿ ವಾದಿಸಿದ್ದಾರೆ. ಆ ಕಾಲದಲ್ಲಿ ಇದು ನಿಜವಾಗಿಯೂ ವಿಳಂಬ ಮಾಡುವಂತಹ ಸ್ಪಷ್ಟ ಕಾರ್ಯತಂತ್ರವಾಗಿತ್ತು. ಈ ಮಸೂದೆ ಬೆಂಬಲಿಸಿದ ಮಹಿಳಾ ಎಂಪಿಗಳ ವಿರುದ್ಧ ಸಂಸತ್ ಸದಸ್ಯರು ತೀವ್ರ ವಾಗ್ದಾಳಿಯನ್ನೂ ನಡೆಸಿದ್ದರು. ಇದು ನಮ್ಮ ಇಂದಿನ ಮುಲಾಯಂ, ಶರದ್ ಯಾದವ್‌ರನ್ನು ನೆನಪಿಸುತ್ತದೆ. ಮಹಿಳೆಯರಿಗೆ ರಾಜಕೀಯ ಮೀಸಲು ನೀಡುವ ವಿಚಾರದಲ್ಲಿನ ವಾದ ವಿವಾದ ವೇಳೆ ಶರದ್ ಯಾದವ್, ಇಂದಿನ 'ಬಾಬ್ ಕಟ್ ಮಹಿಳೆಯರು' ಎಂದು ಹೇಳಿದ ರೀತಿಯಲ್ಲೇ ಈ ವಾದ ವಿವಾದಗಳೂ ನಡೆದಿದ್ದವು. ಮಹಿಳಾ ಎಂಪಿಗಳನ್ನು 'ತೀರಾ ಆಕ್ರಮಣಕಾರಿ (ಅಗ್ರೆಸಿವ್) ಎಂದೇ ಅವರು ವರ್ಣಿಸಿದ್ದರು. ಅಷ್ಟೇ ಅಲ್ಲ ; 'ಗಾಡಿಯಾದ ಆಡಂಬರದ ಸೀರೆಗಳನ್ನುಟ್ಟು ಮುಖಕ್ಕೆ ಬಣ್ಣ ಬಳಿದುಕೊಳ್ಳುವ ಮಹಿಳೆಯರು' ಎಂದೂ ವರ್ಣಿಸಿದ್ದರು. ಕಡೆಗೆ ಗಂಡಂದಿರು ಅಡುಗೆ ಮಾಡುವಂತೆ ಈ ಕಾನೂನುಗಳು ಮಾಡುತ್ತವೆಯೆ ? ಎಂದು ವ್ಯಂಗ್ಯವಾಗಿ ಕೇಳಿದ್ದೂ ಈ ಚರ್ಚೆಗಳಲ್ಲಿ ದಾಖಲಾಗಿದೆ.

ಜನಸಂಘದ ಸಂಸ್ಥಾಪಕರಾದ ಶ್ಯಾಮ ಪ್ರಸಾದ್ ಮುಖರ್ಜಿ ಅವರ ಭಾಷಣ ಇಲ್ಲಿ ವಿಶೇಷವಾಗಿ ಮುಖ್ಯವಾದುದು. ಈ ಮಸೂದೆ 'ಮಿಲಿಯಾಂತರ ಜನರಿಂದ ಪವಿತ್ರವೆಂದು ಪರಿಗಣಿಸಲಾದ ಹಿಂದೂ ವಿವಾಹದ ಕಟ್ಟಕಡೆಯ ತನಕ ಉಳಿಯುವ ಬಿಡಲಾಗದಂತಹ ಸಂಬಂಧದ ಸ್ವರೂಪವನ್ನು ನಾಶ ಮಾಡುತ್ತದೆ ' ಎಂದು ಅವರು ಹೇಳಿದ್ದರು. ಇದನ್ನು ಅಂಗೀಕರಿಸಿದ್ದೇ ಆದಲ್ಲಿ 'ಚಂಡ ಮಾರುತದ ಅಲೆ ಎದ್ದೇಳಲಿದೆ' ಎಂಬ ಬೆದರಿಕೆಯನ್ನೂ ಒಡ್ಡಿದರು. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿನ 'ಸ್ತ್ರೀ ಪುರುಷರ ಹೊಂದಾಣಿಕೆ ಕೊರತೆ'ಯನ್ನೂ ಟೀಕಿಸಿ, ಬುದ್ಧನ ಉದಾಹರಣೆಯನ್ನು ಕೊಟ್ಟು, ಹಿಂದೂ ಸಮಾಜ ತನಗೆ ತಾನೇ ಸುಧಾರಣೆಗೊಳ್ಳುವುದು ಎಂಬ ವಾದವನ್ನೂ ಅವರು ಮಂಡಿಸಿದ್ದರು. ಕಾನೂನು ಬೇಕೇ ಬೇಕು ಎಂದಾದಲ್ಲಿ ಆಯ್ಕೆಯ ಅವಕಾಶ ನೀಡಿ. ಇಷ್ಟ ಇರುವವರಷ್ಟೇ ಅದರ ವ್ಯಾಪ್ತಿಗೆ ಒಳ ಪಡಬಹುದು ಎಂದು ಅವರು ವಾದಿಸಿದ್ದರು.

ತಮ್ಮ ಉತ್ತರಗಳಲ್ಲಿ ಅಂಬೇಡ್ಕರ್ ಅವರು ಸಾಂಪ್ರದಾಯಿಕ ಬ್ರಾಹ್ಮಣ ಹಿಂದೂತ್ವದ 'ಪಾವಿತ್ರ್ಯದ ವಿವಾಹ' ಎಂಬುದು 'ಪುರುಷನಿಗೆ ಬಹುಪತ್ನಿತ್ವ ;ಮಹಿಳೆಗೆ ನಿರಂತರ ದಾಸ್ಯ' ಎಂದು ವರ್ಣಿಸಿದ್ದರು. ಹಿಂದೂ ಕೋಡ್ ಮಸೂದೆಯನ್ನು ಇಷ್ಟವಿದ್ದವರು ಮಾತ್ರ ಅನುಸರಿಸಬಹುದು ಎಂದಾದಲ್ಲಿ ಅದು ಸಂಸತ್ತಿನ ಕಾನೂನು ಮಾಡುವ ಅಧಿಕಾರವನ್ನೇ ಹಾಸ್ಯ ಮಾಡಿದಂತೆ ಎಂದು ವರ್ಣಿಸಿದ್ದರು. ಮುಖರ್ಜಿ ಅವರ ವಾದಕ್ಕೆ ನಿರ್ದಿಷ್ಟ ಪ್ರತಿಕ್ರಿಯೆಯಾಗಿ ಮೂಲಭೂತವಾಗಿ ಹಿಂದೂ ಸಮಾಜ ಸುಧಾರಣೆಯಾಗದು. ಬುದ್ಧನ ಉಪದೇಶಗಳಲ್ಲಿ ಹೆಚ್ಚೇನೂ ಕೆಡುಕು ಮಾಡದಂತಹ (ಭಾಗಶಃ ಆದರ್ಶವಾಗಿ ಅಹಿಂಸೆ) ಆಯಾಮಗಳನ್ನಷ್ಟೇ ಅದು ಹೀರಿಕೊಳ್ಳುತ್ತದೆ. ಆದರೆ ಬುದ್ಧ ಹೇಳಿದ ಸಮಾನತೆಯ ಬೋಧನೆಯನ್ನು ತನ್ನೊಳಗೆ ತೆಗೆದುಕೊಂಡಿಲ್ಲ ಎಂದು ಅಂಬೇಡ್ಕರ್ ವಾದಿಸಿದ್ದರು. 'ಹಿಂದೂ ಸಮಾಜ ಏನನ್ನಾದರೂ ಅಳವಡಿಸಿಕೊಳ್ಳಲಿ, ಅದು ಶೂದ್ರರ ದಾಸ್ಯ ಹಾಗೂ ಮಹಿಳೆಯ ಪರಾಧೀನತೆಯ ಸಾಮಾಜಿಕ ಸ್ವರೂಪವನ್ನೆಂದಿಗೂ ಬಿಟ್ಟುಕೊಡದು. ಈ ಕಾರಣಕ್ಕಾಗಿಯೇ ಕಾನೂನು ಈಗ ಅವರ ರಕ್ಷಣೆಗೆ ಮುಂದಾಗಬೇಕು. ಆ ಮೂಲಕ ಸಮಾಜದ ಮುಂದುವರಿಕೆಗೆ ಕಾರಣವಾಗಬೇಕು" ಎಂದು ಅಂಬೇಡ್ಕರ್ ಹೇಳಿದ್ದರು.

ಆದರೆ ಇದರಿಂದೇನೂ ಹೆಚ್ಚು ಸಾಧನೆಯಾಗಲಿಲ್ಲ. ಕಡೆಗೆ, 1947 ರಿಂದ 1951ರ ಸೆಪ್ಟೆಂಬರ್‌ವರೆಗೆ ನಾಲ್ಕು ವರ್ಷಗಳ ಕಾಲ ನೆನೆಗುದಿಗೆ ಬಿದ್ದು ಕಡೆಗೆ ಹಿಂದೂ ಕೋಡ್ ಬಿಲ್ (ಮಸೂದೆ) ಅಂಗೀಕಾರವಾಗಲೇ ಇಲ್ಲ. ಗಮನಿಸಬೇಕಾದ ಅಂಶವೆಂದರೆ, ಇದನ್ನು ಯಶಸ್ವಿಯಾಗಿಸಲು ಕಾಂಗ್ರೆಸ್ ನಾಯಕತ್ವವೂ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ಕಾಂಗ್ರೆಸ್ ತನ್ನ ಸದಸ್ಯರಿಗೆ ಉದಾಹರಣೆಗೆ ಈ ಮಸೂದೆಗೆ ಸಂಬಂಧಿಸಿದಂತೆ ಯಾವುದೇ ವಿಪ್ ಸಹ ನೀಡಲಿಲ್ಲ. ವಿರೋಧಿಗಳ ಆಕ್ಷೇಪವಂತೂ ಗೊತ್ತಿದ್ದದ್ದೇ. ಕಾಂಗ್ರೆಸ್ ಸಮ್ಮೇಳನಗಳಲ್ಲಿ ಎಂದೂ ಚರ್ಚಿಸದೇ ಇದ್ದಂತಹ, ಎಂದೆಂದೂ ಕಾಂಗ್ರೆಸ್ ನಿರ್ಣಯಗಳ ಭಾಗವಾಗದೇ ಇದ್ದ ಮಸೂದೆಯನ್ನು ಅಂಗೀಕರಿಸುವುದು 'ಪ್ರಜಾಸತ್ತಾತ್ಮಕವಲ್ಲ' ಎಂದು ರಾಜೇಂದ್ರ ಪ್ರಸಾದ್ ಬರೆದರು. ಬೇರೊಂದು ಮಾತುಗಳಲ್ಲಿ, ಪ್ರಮುಖ ರಾಷ್ಟ್ರೀಯ ಸಂಘಟನೆಯಾಗಿ ಸುಮಾರು 60 ವರ್ಷಗಳ ಇತಿಹಾಸದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಭೂ ಮಾಲಿಕತ್ವ ಹಾಗೂ ಗೇಣಿದಾರರ ಹಕ್ಕುಗಳು ಮತ್ತಿತರ ಆರ್ಥಿಕ ವಿಚಾರಗಳನ್ನು ಚರ್ಚಿಸಿತ್ತು. ಆದರೆ ಮಹಿಳೆಯರ ಶಾಸನಾತ್ಮಕ ಹಕ್ಕುಗಳ ಇಡೀ ವಿಚಾರಗಳನ್ನು ಮಾತ್ರ ಗಟ್ಟಿಯಾಗಿ ಬದಿಗೆ ಸರಿಸಿತ್ತು ಎಂಬುದು ವ್ಯಕ್ತವಾಗುತ್ತದೆ.

'ಸಾಮಾಜಿಕ ಸುಧಾರಕರು' ಹಾಗೂ 'ರಾಜಕೀಯ ಸುಧಾರಕರು' ಮಧ್ಯದ ಸಂಘರ್ಷದ ಜತೆಗೇ ಕಾಂಗ್ರೆಸ್‌ನ ಇತಿಹಾಸವೂ ಆರಂಭವಾಗಿತ್ತು. ತಿಲಕರ ನೇತೃತ್ವದಲ್ಲಿ ಸಂಪ್ರದಾಯವಾದಿ ರಾಷ್ಟ್ರೀಯವಾದಿಗಳ ವಿಜಯದೊಂದಿಗೆ, ಸಾಮಾಜಿಕ ಸಮ್ಮೇಳನ ಹಾಗೂ ಅದರ ವಿಚಾರಗಳನ್ನು 1890ರಲ್ಲಿ ಕಾಂಗ್ರೆಸ್ ಅಧಿವೇಶನದಿಂದ ತೆಗೆದು ಹಾಕಲಾಗಿತ್ತು. ಈಗ ಸ್ವಾತಂತ್ರ್ಯದ ಸಂದರ್ಭದಲ್ಲಿ ಮತ್ತೆ ವಿವಾಹ ಹಾಗೂ ಉತ್ತರಾಧಿಕಾರ ಸುಧಾರಣೆ ವಿಷಯದಲ್ಲಿನ ಸಂಘರ್ಷದೊಂದಿಗೆ ಮತ್ತೆ ಇದು ತಾರಕಕ್ಕೇರಿತ್ತು. ಬೇರೊಂದು ಮಾತುಗಳಲ್ಲಿ ಹೇಳುವುದಾದಲ್ಲಿ 1890 ರ ದಶಕದಲ್ಲಿ ತಿಲಕರ ಸಂಪ್ರದಾಯವಾದಿ ಅನುಯಾಯಿಗಳು ಕಾಂಗ್ರೆಸ್ ಮಂಟಪದಿಂದಾಚೆಗೆ ಸಮಾಜವಾದಿ ಸಮ್ಮೇಳನವನ್ನು ಓಡಿಸಲು ಯಶಸ್ವಿಯಾಗಿದ್ದಲ್ಲಿ, 1950 ರಲ್ಲೂ ಹೆಚ್ಚಿನ ಬದಲಾವಣೆಗಳೇನೂ ಆಗಿರಲಿಲ್ಲ. ಸಂಪ್ರದಾಯವಾದಿ ಕಟ್ಟಾ ಬ್ರಾಹ್ಮಣವಾದಿಗಳನ್ನು ನಿರ್ವಹಿಸುವಲ್ಲಿ ಕಾಂಗ್ರೆಸ್ ನ 'ಸೌಮ್ಯವಾದಿ' ಹಾಗೂ 'ಪ್ರಗತಿಪರ' ನಾಯಕತ್ವದಲ್ಲಿ ಹೆಚ್ಚಿನ ಬದಲಾವಣೆಗಳು ಆಗಿರಲಿಲ್ಲ. ಗಾಂಧಿಯವರ ಎಲ್ಲಾ ಸುಧಾರಣಾ ವಾದಗಳು ಕಡೆಗೆ ಹೆಚ್ಚಿನ ಬದಲಾವಣೆ ತರಲಿಲ್ಲ. ತೀವ್ರವಾಗಿ ನಿರಾಶೆಗೊಂಡ ಅಂಬೇಡ್ಕರ್ 1951 ರ ಸೆಪ್ಟೆಂಬರ್ 21 ರಂದು ತಮ್ಮ ಕಾನೂನು ಸಚಿವ ಸ್ಥಾನಕ್ಕೇ ರಾಜೀನಾಮೆ ನೀಡಿದರು. ತಮ್ಮ ಪತ್ರದಲ್ಲಿ (ಸಂಸತ್ತಿನಲ್ಲಿ ಇದನ್ನು ಓದುವುದನ್ನು ತಡೆಹಿಡಿಯಲಾಯಿತು) ಪರಿಶಿಷ್ಟ ಜಾತಿಗಳಿಗೆ ತೋರುತ್ತಿರುವ ನಿರ್ಲಕ್ಷ್ಯದ ಬಗ್ಗೆ ಆತಂಕವನ್ನು ವ್ಯಕ್ತ ಪಡಿಸಿದ್ದರು. ಕಾಂಗ್ರೆಸ್‌ನ ವಿದೇಶಾಂಗ ನೀತಿ (ಅಪಾರ ಮಿಲಿಟರಿ ವೆಚ್ಚವೂ ಸೇರಿದಂತೆ) ಬಗ್ಗೆಯೂ ಆಕ್ಷೇಪ ವ್ಯಕ್ತ ಪಡಿಸಿದ್ದರು. ಆದರೆ ತಮ್ಮ ರಾಜೀನಾಮೆಗೆ ಅಂತಿಮ ಕಾರಣವೆಂದರೆ ವಿವಾಹ ಹಾಗೂ ಉತ್ತರಾಧಿಕಾರದ ಕಾನೂನುಗಳ ಶಾಸನಾತ್ಮಕ ಸುಧಾರಣೆಗಳ ಪ್ರಯತ್ನಗಳನ್ನು ಕಾಂಗ್ರೆಸ್ ನಾಯಕತ್ವ ನಿರ್ವಹಿಸಿದ ರೀತಿಯು ತಮಗೆ ನಿರಾಶೆ ಮಾಡಿದ್ದೂ ಕಾರಣ ಎಂದು ಅಂಬೇಡ್ಕರ್ ಬರೆಯುತ್ತಾರೆ.

'ಹಿಂದೂ ಕೋಡ್' ಎಂಬುದು ಸಂಸತ್ ಹಿಂದೆಂದೂ ಕೈಗೊಂಡಿರದಂತಹ ಅತ್ಯಂತ ದೊಡ್ಡ ಸಾಮಾಜಿಕ ಸುಧಾರಣೆಯ ಕ್ರಮವಾಗಿತ್ತು.. ಅದರ ಪ್ರಾಮುಖ್ಯತೆಯ ದೃಷ್ಟಿಯಿಂದ ಅದನ್ನು ಭಾರತೀಯ ಶಾಸಕಾಂಗ ಈ ಹಿಂದೆ ಅಂಗೀಕರಿಸಿದ ಯಾವುದೇ ಕಾನೂನು ಅಥವಾ ಭವಿಷ್ಯದಲ್ಲಿ ಅಂಗೀಕರಿಸುವ ಸಾಧ್ಯತೆ ಇರುವ ಕಾನೂನಿನ ಜತೆಗೆ ಖಂಡಿತಾ ಇದನ್ನು ಹೋಲಿಸಲಾಗದು. ಹಿಂದೂ ಸಮಾಜದ ಆತ್ಮವೆನಿಸಿರುವ ವರ್ಗ ವರ್ಗಗಳ ಮಧ್ಯೆ ಅಸಮಾನತೆಯನ್ನು ಹಾಗೇ ಬಿಡುವುದು (ಇಲ್ಲಿ ಜಾತಿ ಎಂಬುದೇ ಅವರ ಸ್ಪಷ್ಟ ಅರ್ಥ) ಅಥವಾ ಲಿಂಗ ಲಿಂಗಗಳ ಅಸಮಾನತೆಯನ್ನು ಸ್ಪರ್ಶಿಸದೇ ಆರ್ಥಿಕ ಸಮಸ್ಯೆಗಳಿಗಷ್ಟೇ ಸಂಬಂಧಿಸಿದಂತೆ ಕಾನೂನು ಮಾಡುವುದು ನಮ್ಮ ಸಂವಿಧಾನವನ್ನು ಅಣಕ ಮಾಡಿದಂತೆ. ತಿಪ್ಪೆ ಗುಂಡಿಯ ಮೇಲೆ ಅರಮನೆ ಕಟ್ಟಿದಂತಾಗುತ್ತದೆ. ಇದು ಹಿಂದೂ ಕೋಡ್‌ಗೆ ನಾನು ನೀಡಿರುವ ಪ್ರಾಮುಖ್ಯ ಎಂದಿದ್ದರು ಅಂಬೇಡ್ಕರ್.

ಪಿತೃಪ್ರಾಧಾನ್ಯ ಹಾಗೂ ಜಾತಿಯ ಸಾಮಾಜಿಕ ಕೊಚ್ಚೆಗಳನ್ನು ಒಂದು ಸ್ವಲ್ಪವೂ ಮುಟ್ಟದೆ ಬರೀ ಕ್ಷೇಮಾಭಿವೃದ್ಧಿ ಹಾಗೂ ಅಭಿವೃದ್ಧಿಯ ಆರ್ಥಿಕ ಸ್ವರೂಪಗಳನ್ನು ಸೃಷ್ಟಿಸಲು ಯತ್ನಿಸುವ ಕ್ರಮಕ್ಕೆ 'ತಿಪ್ಪೆ ಗುಂಡಿಯ ಮೇಲೆ ಅರಮನೆ ಕಟ್ಟುವುದು' ಎಂಬುದು ಅಂಬೇಡ್ಕರ್ ಅವರ ವಿವರಣಾತ್ಮಕ ನುಡಿಗಳಾಗಿದ್ದವು. ಬ್ರಾಹ್ಮಣ ಸಾಮಾಜಿಕ ಸ್ವರೂಪದ ಪ್ರಾಚೀನ ಹಾಗೂ ಪವಿತ್ರ ಸ್ವರೂಪದ ಪರಿಕಲ್ಪನೆಯನ್ನು ಆಕ್ರಮಣ ಮಾಡುವಲ್ಲಿ, 'ಇದು ಭಾರತೀಯ ಸಮಾಜವನ್ನು ಪ್ರತಿನಿಧಿಸದು' ಬುದ್ಧ ಪ್ರತಿನಿಧಿಸಿದ ಸಮಾನತೆಯ ಪ್ರಗತಿಪರ ಪರಂಪರೆಗಳಿಗೆ ಪ್ರತಿಕ್ರಿಯೆಯ ವಿಜಯವನ್ನಷ್ಟೇ ಇದು ಧ್ವನಿಸುತ್ತದೆ' ಎಂದು ಅಂಬೇಡ್ಕರ್ ಪ್ರತಿಪಾದಿಸುತ್ತಿದ್ದರು. ಐದು ವರ್ಷಗಳ ನಂತರ, ಅವರು ಬೌದ್ಧಧರ್ಮದ ಪುನರುಜ್ಜೀವನದ ಮುಂಚೂಣಿಯಲ್ಲಿದ್ದರು.

ಹೊಸ ಸ್ವತಂತ್ರ ಭಾರತೀಯ ಸಮಾಜದ ಎರಡು ಬಹುಮುಖ್ಯ ಕರಡುಗಳನ್ನು ರೂಪಿಸಿ ಸೃಷ್ಟಿಸಲು ನೆರವು ನೀಡಿದರು ಅಂಬೇಡ್ಕರ್. ಅವುಗಳಲ್ಲಿ ಒಂದು ಸಂವಿಧಾನ ; ಮತ್ತೊಂದು ಹಿಂದೂ ಕೋಡ್ ಬಿಲ್. ಸಂವಿಧಾನ ಯಶಸ್ಸು ಸಾಧಿಸಿತು. ಏಕೆಂದರೆ ಸ್ವಾತಂತ್ರ್ಯ ಚಳವಳಿಯ ವಿಸ್ತೃತ ಒಟ್ಟಾಭಿಪ್ರಾಯದ ಬೆಂಬಲ ಅದಕ್ಕಿತ್ತು. ಆದರೆ ಹಿಂದೂ ಕೋಡ್ ಬಿಲ್ ವಿಫಲವಾಯಿತು. ಶ್ಯಾಮ ಪ್ರಸಾದ ಮುಖರ್ಜಿ ಪ್ರತಿನಿಧಿಸಿದ ಸಂಪ್ರದಾಯವಾದಿಗಳ ಪ್ರತಿರೋಧ ಇದಕ್ಕೆ ಮುಖ್ಯ ಕಾರಣ. ಅಲ್ಲದೆ ಈ ಮಸೂದೆಗೆ ಪಟ್ಟು ಹಿಡಿಯುವಂತಹ ಗಟ್ಟಿ ನಾಯಕತ್ವವೂ ಕಾಂಗ್ರೆಸ್‌ನಲ್ಲಿ ಇರಲಿಲ್ಲ.

ಈ ಹಿನ್ನೆಲೆಯಲ್ಲಿ ಅಧಿಕಾರ ವರ್ಗಾವಣೆಗಿಂತ ಸಮಾನತೆಯ ಸಮಾಜದ ಸೃಷ್ಟಿಯೇ ಹೆಚ್ಚು ತ್ರಾಸದಾಯಕವಾದ ಪ್ರಕ್ರಿಯೆ ಆಗಿತ್ತು. ಸ್ವಾತಂತ್ರ್ಯ ಬಂದು 50 ವರ್ಷಗಳಾದರೂ ಮಹಿಳೆಯ ಆಸ್ತಿ ಹಕ್ಕು ಹಾಗೂ ರಾಜಕೀಯ ಪ್ರಾತಿನಿಧ್ಯದ ಶಾಸನಾತ್ಮಕ ಸ್ವರೂಪಗಳನ್ನು ಯಶಸ್ವಿಯಾಗಿ ರೂಪಿಸಲಾಗಲೇ ಇಲ್ಲ.

ಆದರೆ 2005 ರ ಆಗಸ್ಟ್ ತಿಂಗಳಲ್ಲಿ ಮುಕ್ತಾಯವಾದ ಸಂಸತ್ತಿನ ಮುಂಗಾರು ಅಧಿವೇಶನದಲ್ಲಿ ಅಂಗೀಕಾರ ಪಡೆದ 2004 ರ ಹಿಂದೂ ಉತ್ತರಾಧಿಕಾರ ತಿದ್ದುಪಡಿ ಮಸೂದೆ ಈ ನಿಟ್ಟಿನಲ್ಲಿ ಈಗಲಾದರೂ ಇರಿಸಿದ ಹೊಸ ಹೆಜ್ಜೆಯಾಗಿದೆ. ಸಂಸತ್ತಿನಲ್ಲಿ ರಾಜಕೀಯ ಪ್ರಾತಿನಿಧ್ಯ ಕಲ್ಪಿಸುವ ಮಹಿಳಾ ಮೀಸಲು ಮಸೂದೆ ಮಾತ್ರ ಈಗಲೂ ನೆನೆಗುದಿಗೆ ಸಿಕ್ಕಿದೆ.

**(ಮೂಲ : ದಿ ಹಿಂದೂ ಪತ್ರಿಕೆ 18-02-1998- ಕನ್ನಡಕ್ಕೆ : ಮಂಜುಳಾ)**

# 'ಜಯ' ಮಹಾಭಾರತಕ್ಕೆ ಸ್ತ್ರೀವಾದಿ ದೃಷ್ಟಿಕೋನದ ಕನ್ನಡಿ

ಡಾ॥ ಎಂ.ಎಸ್.ವೇದಾ ಅವರ 'ಜಯ' ಕಾದಂಬರಿ ಇತ್ತೀಚಿನ ಗಮನಾರ್ಹ ಪ್ರಕಟಣೆಗಳಲ್ಲಿ ಒಂದು. ಲೇಖಕಿಯ ಬರವಣಿಗೆ ತಲುಪಿರುವ ಹೊಸ ನೆಲೆಯನ್ನು ದಾಖಲಿಸುವ ಕೃತಿ. ಈಗಾಗಲೇ ಸ್ಥಾಪಿತಗೊಂಡಿರುವ ಅನೇಕ ಅಭಿಪ್ರಾಯಗಳನ್ನು ಮರುಪರೀಶಿಲಿಸಲು ಒತ್ತಾಯಿಸುವ, ಆ ಮೂಲಕ ಚರ್ಚೆಗೆ ಎಳೆಯುವ ಕಾದಂಬರಿ.

ಎಂ.ಎಸ್. ವೇದಾ ಚಿಕ್ಕ ವಯಸ್ಸಿನಲ್ಲೇ ಗಮನಾರ್ಹ ಶಕ್ತಿಯನ್ನು ತೋರಿದವರು. ಅವರು ಬರೆಯಲು ಆರಂಭಿಸಿ ಇಪ್ಪತ್ತು ವರ್ಷಗಳೇ ಸಂದಿವೆ ! ಅವರ ಮೊದಲ ಕವನ ಸಂಕಲನ 1985ರಲ್ಲಿ ಪ್ರಕಟಗೊಂಡಿತು (ಕಾವ್ಯಕೂಸು). ಆನಂತರ 'ಗಂಗೋತ್ರಿಯಲ್ಲಿ' (1987), 'ಬಿಳಲುಗಳು' (1989), 'ದಾಖಲಾಗುವುದು ಬೇಡ' 2004 - ಎಂಬ ನಾಲ್ಕು ಸಂಕಲನಗಳನ್ನು ಅವರು ಹೊರತಂದಿದ್ದಾರೆ. ಇದರ ಜೊತೆಗೆ 'ಪ್ರೀತಿ ಮತ್ತು ಸಾವು' (1993), 'ಪಾಲು' (1997), 'ಬಿಳಿಯೆಣ್ಣು ಮತ್ತು ದುಂಡವ್ವನ ದೆವ್ವ' (2002) ಎಂಬ ಕಥಾ ಸಂಕಲನಗಳೂ, 'ಜಮೀನು' (2000) ಮತ್ತು 'ಜಯ' (2004) ಎಂಬೆರೆಡು ಕಾದಂಬರಿಗಳೂ ಪ್ರಕಟಗೊಂಡಿವೆ. 'ಚದುರಂಗ : ಬದುಕು ಮತ್ತು ಬರಹ' ಎಂಬ ಮಾನೋಗ್ರಾಫ್‌ವೊಂದನ್ನು ಅವರು ರಚಿಸಿದ್ದಾರೆ. ಎಂ.ಎಸ್. ಪುಟ್ಟಣ್ಣನವರ ಬದುಕು - ಬರಹವನ್ನು ಕುರಿತು ಅವರ ಮಹಾಪ್ರಬಂಧಕ್ಕೆ ಮೈಸೂರು ವಿ.ವಿ. ಡಾಕ್ಟರೇಟ್ ಪದವಿ ನೀಡಿದೆ. ಇದು ಎರಡು ದಶಕಗಳಲ್ಲಿ ಎಂ.ಎಸ್.ವೇದಾ ಅವರ ಸಾಹಿತ್ಯ ಸೃಷ್ಟಿ. ಇದಕ್ಕಾಗಿ ಹಲವಾರು ಪ್ರಶಸ್ತಿಗಳಿಂದಲೂ ಅವರು ಪುರಸ್ಕೃತರಾಗಿದ್ದಾರೆ.

ಇತ್ತೀಚಿನ ಎಲ್ಲ ಸ್ತ್ರೀವಾದಿ ಸಾಹಿತ್ಯಕ ಅಧ್ಯಯನಗಳಲ್ಲಿ ವೇದಾ ಚರ್ಚೆಗೆ ಒಳಪಟ್ಟಿದ್ದಾರೆ. ಡಾ॥ ವಿಜಯಾ ದಬ್ಬೆ ಗುರುತಿಸಿರುವಂತೆ ವೇದಾ ಪ್ರಮುಖವಾಗಿ ಕತೆಗಾರ್ತಿ. ಕಥನ ಕಲೆ ಅವರಿಗೆ ತುಂಬ ಸಹಜವಾಗಿ ಒಲಿದಿದೆ. ಅವರ ಕತೆಗಳು ಮತ್ತು ಕಾದಂಬರಿಗಳಲ್ಲಿ ಅವರು ಆಯ್ಕೆ ಮಾಡಿಕೊಂಡಿರುವ ವಸ್ತು, ನಿರೂಪಣಾ ಶೈಲಿ, ಕಾದಂಬರಿಯ ಕ್ಯಾನ್‌ವಾಸ್ ಅವರೊಬ್ಬ ಶಕ್ತಿಯುತ ಬರಹಗಾರ್ತಿಯೆಂಬುದನ್ನು ಪುಷ್ಟೀಕರಿಸಿವೆ.

'ಜಯ' ಕಾದಂಬರಿಗೆ ಅವರು ಆಯ್ಕೆ ಮಾಡಿಕೊಂಡ ವಸ್ತುವೇ ಬೆರಗುಗೊಳಿಸುವಂಥದ್ದು. 'ಮಹಾಭಾರತ' ವನ್ನು ಸ್ತ್ರೀವಾದಿ ಪರಿಪ್ರೇಕ್ಷದಿಂದ ನಿರೂಪಿಸುವ ಅಪರೂಪದ ಸಾಹಸಕ್ಕೆ ಕೈಹಾಕಿದ್ದಾರೆ. ಆ ಮೂಲಕ ಅಭಿಜಾತ ದೃಷ್ಟಿಕೋನವನ್ನು, ಅವು ಸ್ಥಾಪಿಸುವ ಮೌಲ್ಯಗಳನ್ನು ಪ್ರಶ್ನಿಸಿದ್ದಾರೆ. ಜೊತೆಗೆ ಸ್ತ್ರೀವಾದಿ ಅಧ್ಯಯನದ ನೆಲೆಯಲ್ಲಿ ಪುನರ್ಮೌಲ್ಯೀಕರಣಕ್ಕೆ ನಾಂದಿ ಹಾಡಿದ್ದಾರೆ. ವಿಚಾರವಾದದ ನೆಲೆಯಲ್ಲಿ ಮಹಾಭಾರತವನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಇಲ್ಲಿದೆ.

ಸುಮಾರು ಮುನ್ನೂರ ಎರಡು ಪುಟಗಳಲ್ಲಿ ಕಾದಂಬರಿ ಮೈ ಚಾಚಿದೆ. ಭೈರಪ್ಪನವರ 'ಪರ್ವ'ದ ನಂತರ ಮಹಾಭಾರತದ ಕಥೆಯನ್ನು ಕಾದಂಬರಿಯಾಗಿಸುವ ವಿಶಿಷ್ಟ ಪ್ರಯೋಗವನ್ನು ಎಂ.ಎಸ್. ವೇದಾ ಮಾಡಿದ್ದಾರೆ. ಎಷ್ಟೋ ಕಡೆ ಹಿಂದಿನ ಮಹಾಭಾರತ ಕರ್ತೃಗಳಿಗೆ ಋಣಿಯಾಗಿದ್ದಾರಾದರೂ ಕೆಲವೊಂದು ಸನ್ನಿವೇಶಗಳನ್ನು ಸೃಷ್ಟಿಸುವಲ್ಲಿ ಚಂದ್ರಸೇನ, ರೋಹಿಣಿ, ಕಾಳಕಂಭು ಮುಂತಾದ ಪಾತ್ರಗಳ ಸೃಷ್ಟಿಯಲ್ಲಿ ಲೇಖಕಿಯ ಸ್ವೋಪಜ್ಞತೆ ಎದ್ದು ಕಾಣುತ್ತದೆ.

ಹದಿನೆಂಟು ದಿನಗಳ ಕಾಲ ನಡೆಯುವ ಯುದ್ಧಾವಧಿಯನ್ನೇ 18 ಅಧ್ಯಾಯಗಳಾಗಿ ವಿಂಗಡಿಸಿದ್ದಾರೆ. ಮಹಾಭಾರತ ಯುದ್ಧವೇ ಇಲ್ಲಿನ ಕೇಂದ್ರ. ಹೆಣ್ಣಿನಿಂದ ಯುದ್ಧ ನಡೆಯಿತು. ಹೆಣ್ಣಿಗಾಗಿ ಮಣ್ಣಾದರು ಎಂಬರ್ಥದ ಸವಕಲು ಮಾತುಗಳಿಗೆ ಲೇಖಕಿ ಎಳ್ಳುನೀರು ಬಿಟ್ಟಿದ್ದಾರೆ. ಕಾದಂಬರಿಯುದ್ದಕ್ಕೂ ಲೇಖಕಿ ಯುದ್ಧ ವಿರೋಧಿ ನೀತಿಯ ಮೌಲ್ಯವನ್ನು ಎತ್ತಿ ಹಿಡಿದಿದ್ದಾರೆ. ಇಷ್ಟು ದೀರ್ಘಕಾಲ ನಡೆದ ಯುದ್ಧಕ್ಕೆ ಕಾರಣ ಹೆಣ್ಣಲ್ಲ, 'ಪುರುಷ ರಾಜಕಾರಣ' ಎಂಬುದು ಲೇಖಕಿ ನೀಡುವ ಒಟ್ಟಾರೆ ವ್ಯಾಖ್ಯಾನ.

ಆರಂಭದಲ್ಲೇ ಉತ್ತರನ ಪಾತ್ರಚಿತ್ರಣದಲ್ಲಿ ಇಂಥ ವಿಚಾರವನ್ನು ಮನಗಾಣಬಹುದು. ಇಲ್ಲಿನ ಉತ್ತರ ಕುಮಾರ ಪೂರ್ವ ಕರ್ತೃಗಳು ಚಿತ್ರಿಸಿರುವಂತೆ ಹಂಬೇಡಿಯಲ್ಲ. ಬದಲಿಗೆ ಬದುಕಿನ ಯಾವುದೇ ಸಂಘರ್ಷಗಳಿಗೆ ತನ್ನನ್ನು ಒಡ್ಡಿಕೊಳ್ಳಲು ಅವಕಾಶವೇ ಲಭಿಸದಿದ್ದವನು. ಯುದ್ಧ ವಿರೋಧ ಮನೋಭಾವದವನು. 'ಏನೇ ಇರಲಿ ಎಂದಿಗೂ ಯಾವೊಂದು ಸಮಸ್ಯೆಗಳಿಗೂ ಯುದ್ಧ ಪರಿಹಾರವಲ್ಲ. ಹಲವು ಸಮಸ್ಯೆಗಳಿಗೆ ಮೂಲವದು. ಬೆತ್ತಲೆ ರಾಜ್ಯದಲ್ಲಿ ಬಟ್ಟೆ ಉಟ್ಟವರೇ ಹುಚ್ಚರು ಎನ್ನುವಂತೆ ನಾನೊಬ್ಬ ಹೇಡಿಯಾಗಿ ಎಲ್ಲರ ನಗುವಿಗೆ ಗುರಿಯಾಗಿದ್ದೇನೆ ಅಷ್ಟೇ' ಎಂಬ ಅವನ ಮಾತು ಕಾದಂಬರಿಯಗಟ್ಟಿ ಮಾತುಗಳಲ್ಲೊಂದು. ಅವನ ಮರಣದ ಸುದ್ದಿ ಕೇಳಿ ಕಕ್ಕುಲತೆ ಸೂಸುವವಳು ದ್ರೌಪದಿಯೊಬ್ಬಳೇ. ಇದೇ ರೀತಿ ಅಭಿಮನ್ಯು ಪಾತ್ರವನ್ನೂ ಯುದ್ಧ ವಿರೋಧಿ ಜಿಜ್ಞಾಸೆಗೆ ಲೇಖಕಿ ನೂಕುತ್ತಾರೆ. ಯುದ್ಧಮಾಡೆನೆಂದರೆ ಉತ್ತರನಂತೆ ತನ್ನನ್ನೂ ಗೇಲಿ ಮಾಡಿ ಬಿಡಬಹುದೆಂಬ ಭಾವನೆಯೊಂದೇ ಅಭಿಮನ್ಯುವಿನ ಮಹತ್ವಾಕಾಂಕ್ಷೆಯ 'ಬಲಿ'ಗೆ ದಾರಿಯಾಗುತ್ತದೆ.

ಭೀಷ್ಮನ ಪಾತ್ರವನ್ನು ಲೇಖಕಿ ಅತ್ಯಂತ ಕಕ್ಕುಲತೆಯಿಂದ ಕಡೆದಿರಿಸಿದ್ದಾರೆ. ಅವನೊಬ್ಬ ಬ್ರಹ್ಮಚಾರಿ ಮಾತ್ರವಲ್ಲ, ಮಹಾಶೂರ, ನಿಷ್ಠುರ ಯೋಧ. ಇಷ್ಟೇ ಅಲ್ಲ ಅವನ ಎದೆಯಾಳದಲ್ಲೊಬ್ಬ ಅಂತಃಕರಣಭರಿತ

ತಾಯಿಯಿದ್ದಾಳೆ. ಭೀಷ್ಮನಿಂದ ಗರ್ಭದಾನ ಮಾಡಿಸಿಕೊಳ್ಳಬೇಕೆಂಬ ಅಂಬೆ-ಅಂಬಾಲಿಕೆಯರ ಬಯಕೆಯೂ ಲೇಖಕಿಯ ಸ್ವಂತಿಕೆಯನ್ನು ಮೆರೆಯುತ್ತವೆ. ಭೀಷ್ಮನನ್ನು "ಪರೋಪಕಾರಂ ಇದಮಿತ್ಥಂ ಶರೀರಂ" ಎಂದು ವ್ಯಾಖ್ಯಾನಿಸಿರುವುದನ್ನು ನೋಡಿದರೆ ಲೇಖಕಿ ಭೀಷ್ಮ ಪಕ್ಷಪಾತಿ ಎಂಬುದು ಮನದಟ್ಟಾಗುತ್ತದೆ.

ಭೀಷ್ಮ ಉತ್ತರ, ಅಭಿಮನ್ಯು ಮುಂತಾದ ಪಾತ್ರ ಸೃಷ್ಟಿಯಲ್ಲಿ ಲೇಖಕಿ ಸಮಚಿತ್ತತೆಯನ್ನು ಕಾಯ್ದುಕೊಂಡು, ನೆನಪಿನಲ್ಲಿ ಉಳಿಯುವಂತೆ ಮಾಡಿರುವುದು ಶ್ಲಾಘನೀಯ.

ಪಾಂಡವರಲ್ಲಿ ಭೀಮನೊಬ್ಬನೇ ದ್ರೌಪದಿಗೆ ನಿಜವಾದ ಅರ್ಥದಲ್ಲಿ ಗಂಡ ಹಾಗಾಗಿಯೇ ದ್ರೌಪದಿ ಭೀಮನ ಸಖ್ಯದಲ್ಲಿ ಸಾರ್ಥಕ್ಯವನ್ನು ಕಾಣುತ್ತಾಳೆ. ಉಳಿದವರ ಬಗ್ಗೆ ಅವಳಲ್ಲಿ ಯಾವ ಮಧುರ ಭಾವನೆಗಳೂ ಅಂತರಂಗದಲ್ಲುಳಿದಿಲ್ಲ. ಗಂಡರೆನ್ನಿಸಿಕೊಂಡ ಈ ಯಾರಲ್ಲಿಯೂ ತನ್ನನ್ನು ಪ್ರೀತಿಸುವ, ಕಾಯುವ, ಸುಖ-ದುಃಖ ಹಂಚಿಕೊಳ್ಳುವ ಬದ್ಧತೆಯಿಲ್ಲ ಅಂತ ಅನ್ನಿಸತೊಡಗಿದಾಗ ಮೊದಲಿನಿಂದಲೂ ಗಟ್ಟಿಗಿತ್ತಿಯಾಗಿದ್ದ ದ್ರೌಪದಿ ಅಳಿದುಳಿದ ಕೋಮಲ ಭಾವನೆಗಳನ್ನು ತೋರಿದ್ದಳು. ತನ್ನನ್ನು ತಾನೇ ಕಾಯ್ದುಕೊಳ್ಳಲು ಅದು ಅತ್ಯಂತ ಅಗತ್ಯವಾಗಿತ್ತು.

ಇದಕ್ಕೆ ಪೂರ್ವದಲ್ಲಿ ದ್ರೌಪದಿಯನ್ನು ಪಾಂಡವರು ಹಂಚಿಕೊಂಡ ಬಗೆಗೆ ಲೇಖಕಿ ಅಸಹಮತ ತೋರುತ್ತಾರೆ. ನೂರೊಂದು ಜನ ಕೌರವರ ದ್ವೇಷ ಮತ್ತದರ ಪರಿಣಾಮವನ್ನು ತಾವು ನಿರಂತರವಾಗಿ ಉಣ್ಣುತ್ತಲೇ ಬಂದಿದ್ದನ್ನು ಗಮನದಲ್ಲಿರಿಸಿಕೊಂಡು ಪಾಂಡವರು ದ್ರೌಪದಿಯ ಕಾರಣಕ್ಕಾಗಿ ಒಂಟೊಂಟಿಯಾಗಿ ನಿಂತು ಬಿಡುವುದನ್ನು ಆಶಿಸದೆ, ಅವರೆಲ್ಲರ ಒಗ್ಗಟ್ಟನ್ನು ಬೆಸೆಯುವ ಹಗ್ಗವಾದಳು ದ್ರೌಪದಿ ಎಂಬ ವೇದಾರ ವ್ಯಾಖ್ಯಾನ ಅರ್ಥಪೂರ್ಣವೆನಿಸಿದೆ. ಜೊತೆಗೆ ದ್ರೌಪದಿಯ ಮನಸ್ಸಿನಲ್ಲೇನಿದೆ ಎಂಬುದನ್ನು ಯೋಚಿಸಲೂ ಹೋಗದ ಪುರುಷನ ಅಹಂಕಾರವನ್ನು ಪ್ರಶ್ನಿಸುವಂತಿದೆ.

ಇಂತಹ ನೂರಾರು ಹೊಸ ಆಲೋಚನೆಗಳ ಹೊಳಹುಗಳು ಕಾದಂಬರಿಯುದ್ದಕ್ಕೂ ದೊರೆಯುತ್ತವೆ. ದ್ರೌಪದಿಯ ವಸ್ತ್ರಾಪಹರಣದ ಪ್ರಸಂಗವನ್ನು ಹೊಸ ರೀತಿಯಲ್ಲಿ ನಿರೂಪಿಸುತ್ತಾರೆ. ಬಹಿಷ್ಠೆಯಾದ ಕಾರಣ ದುಶ್ಯಾಸನ ಬಂದು ಎಳೆದಾಗ ಒಂದರಮೇಲೊಂದರಂತೆ ನಾಲ್ಕು ಸೀರೆಯನ್ನು ಅವಸರದಲ್ಲಿ ಸುತ್ತಿಕೊಳ್ಳುತ್ತಾಳೆ. ದುಶ್ಯಾಸನ ಸೀರೆಯನ್ನು ಸೆಳೆಸೆಳೆದು ಸುಸ್ತಾದಾಗ ಅದು ಶ್ರೀಕೃಷ್ಣನ ಪವಾಡವಾಗಿ ದುರ್ಯೋಧನ ಭಾವಿಸುವುದಿಲ್ಲ. ಬದಲಿಗೆ ಅದೊಂದು ಗಾರುಡಿ, ಕಣ್ಕಟ್ಟು ಎಂಬಂತೆ ಉದಾಸೀನವಾಗಿ ಕಾಣುವನಲ್ಲದೆ, ಅಷ್ಟೂ ಸೀರೆಯನ್ನು ಹೊತ್ತುಕೊಂಡು ನನ್ನ ಅಂತಃಪುರಕ್ಕೆ ನಡೆಯೆಂದು ದ್ರೌಪದಿಗೆ ಆದೇಶಿಸುತ್ತಾನೆ. ದ್ರೌಪದಿಯ ಅವಮಾನದ ಪ್ರಸಂಗವನ್ನು ಲೇಖಕಿ ವಿವರವಾಗಿ ಚಿತ್ರಿಸಿರುವರಲ್ಲದೆ, ಕಾದಂಬರಿಯುದ್ದಕ್ಕೂ ಅದನ್ನು ಪದೇ ಪದೇ ನೆನಪಿಸಿ ಒಂದು ಬಗೆಯ ಏಕತಾನತೆಯನ್ನು ಮೂಡಿಸಿರುವುದು ಕಾದಂಬರಿಯ ಲೋಪಗಳಲ್ಲೊಂದು.? "ಪುರುಷನೊಂದಿಗೆ ಬದುಕುವ ನಾರಿ ಯಾವಾಗಲೂ ಅವನ ಭಾಗ್ಯವನ್ನೇ ನಿರ್ಧರಿಸುತ್ತಾಳೆ. ಆದರೆ ಪುರುಷ ಸದಾ ಅವಳ ದೌರ್ಭಾಗ್ಯವನ್ನೇ ನಿರ್ಧರಿಸುವುದು ಲೋಕಾರೂಢಿ" ಎಂದು ಶ್ರೀಕೃಷ್ಣ ದ್ರೌಪದಿಯನ್ನು ಸಂತೈಸುವಲ್ಲಿ ಲೇಖಕಿ ಏಕಪಕ್ಷೀಯ ಚಿಂತನೆಯಿಂದ ಯೋಚಿಸುತ್ತಾರೆಂಬ ಅನುಮಾನ ವ್ಯಕ್ತವಾಗುತ್ತದೆ.

ಗಾಂಧಾರಿಯೊಬ್ಬಳೇ ನೂರೊಂದು ಮಕ್ಕಳನ್ನು ಹೆರುವುದಿಲ್ಲ. ಬದಲಿಗೆ ಅವಳ ಸವತಿಯರೆಲ್ಲ ಹತ್ತತ್ತು ಮಕ್ಕಳನ್ನು ಹೆತ್ತು ಕೌರವ ಪಡೆ ನೂರೊಂದು ಜನಬಲದಿಂದ ಆವೃತಗೊಳ್ಳುತ್ತದೆ. ಕಾದಂಬರಿಯಲ್ಲಿ ನೆನಪಿನಲ್ಲುಳಿಯುವ ಎಲ್ಲ ಸ್ತ್ರೀಪಾತ್ರಗಳ ಅಂತರಂಗ ತೆರೆದುಕೊಂಡಿದೆ. ರೋಹಿಣಿ, ಅಭಿಲಾಷಾ, ಗಾಂಧಾರಿ, ಕುಂತಿ ಮತ್ತು ದ್ರೌಪದಿಯರ ಕಥನಕ್ಕೆ ಲೇಖಕಿ ಹೊಸ ಭಾಷ್ಯ ಬರೆದಿದ್ದಾರೆ. ಇಲ್ಲಿನ ಸ್ತ್ರೀಯರು ಕುರುಕ್ಷೇತ್ರದ ಲೋಕದಲ್ಲಿ ನಗೆಯ ಹೂಗಳನ್ನು ಅರಳಿಸುವವರು. ಇವರ ನಗೆ ಯುದ್ಧದ ಕಾರಣಕ್ಕಾಗೇ ಮುರುಟಿ ಹೋಗುವ ವ್ಯಂಗ್ಯವನ್ನು ವೇದಾ ಸರಿಯಾಗಿ ಗ್ರಹಿಸಿದ್ದಾರೆ.

ಈ ಕಾದಂಬರಿ ವೈಚಾರಿಕ ನೆಲೆಯಲ್ಲಿ ಎತ್ತುವ ಮಹತ್ವದ ಪ್ರಶ್ನೆಯೆಂದರೆ ಅಪಾರ ಸಾವು-ನೋವುಗಳಲ್ಲಿ ಕೊನೆಗಾಣುವ ಕುರುಕ್ಷೇತ್ರ ಯುದ್ಧಕ್ಕೆ ಕಾರಣರಾರು ? - ದ್ರೌಪದಿ ? ಕೃಷ್ಣ ? ದುರ್ಯೋಧನ ? ಇವರೆಲ್ಲರ ವ್ಯಕ್ತಿತ್ವ ಮತ್ತು ವರ್ತನೆಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸುತ್ತಾ ಕೊನೆಗೆ ಕಾದಂಬರಿ ನೀಡುವ ಉತ್ತರವೆಂದರೆ 'ಕುರುಕ್ಷೇತ್ರ ಯುದ್ಧಕ್ಕೆ ನಿಜವಾದ ಕಾರಣ ಪುರುಷ ರಾಜಕಾರಣ' ಆಧುನಿಕ ಸ್ತ್ರೀವಾದಿ ಕೇಟ್ ಮಿಲೆಟ್ ರೂಪಿಸುವ 'ಲೈಂಗಿಕ ರಾಜಕಾರಣ' ಎಂಬ ಪರಿಕಲ್ಪನೆಗೆ ಸಂವಾದಿಯಾಗಿರುವ 'ಪುರುಷ ರಾಜಕಾರಣ' ಎಂಬ ಪರಿಕಲ್ಪನೆಯ ಮೂಲಕ ಹೇಗೆ ಅಸಮಾನ ಅಧಿಕಾರಾಧರಿತ ಸ್ತ್ರೀ - ಪುರುಷ ಸಂಬಂಧಗಳೇ ಕೊನೆಗೆ ಕುರುಕ್ಷೇತ್ರದಂತಹ ಯುದ್ಧಗಳನ್ನು ಅನಿವಾರ್ಯ-ವಾಗಿಸುತ್ತವೆ ಎಂಬ ಮೌಲಿಕ ಚಿಂತನೆಯನ್ನು ಈ ಕಾದಂಬರಿ ಮಂಡಿಸುತ್ತದೆ ಎಂಬ ಡಾ॥ಸಿ.ಎನ್.ರಾಮಚಂದ್ರನ್‌ರ ಶಿಫಾರಸ್ಸು ಕಾದಂಬರಿ ತಡೆದುಕೊಳ್ಳುವಂಥದ್ದೇ.

'ಪಂಚಮವೇದ' ಎಂದು ಮುನ್ನುಡಿ ಬರೆದಿರುವ ಸ.ಉಷಾ ಅವರ ವ್ಯಾಖ್ಯಾನವೂ ಅರ್ಥಪೂರ್ಣವೆನಿಸಿದೆ. ಅವರು ಸರಿಯಾಗಿಯೇ ಗುರುತಿಸಿರುವಂತೆ ವೇದಾ ಅವರ ಈ ಕೃತಿ ಹೊಸಮೌಲ್ಯಗಳನ್ನು ಸದ್ದಿಲ್ಲದೆ ಅನಾವರಣಗೊಳಿಸಿದೆ. ಅವರ ಈ ಪ್ರಯತ್ನಕ್ಕೆ ಸಕಾರಾತ್ಮಕ ಪ್ರತಿಕ್ರಿಯೆ ಓದುಗ ವರ್ಗದಿಂದ ಬರಲಿ ಎಂಬುದು ನಮ್ಮ ಆಶಯ.

- ಎಚ್. ಎಸ್. ಸತ್ಯನಾರಾಯಣ

# ಕೌಟುಂಬಿಕ ದೌರ್ಜನ್ಯ

ಕುಟುಂಬದಲ್ಲಿ ಮಹಿಳೆಯರ ಮೇಲೆ ನಡೆಯುವ ಎಲ್ಲಾ ರೀತಿಯ ಕೌಟುಂಬಿಕ ದೌರ್ಜನ್ಯ, ವರದಕ್ಷಿಣೆ ಕಿರುಕುಳವು ಸೇರಿದಂತೆ ಒಂದು ವಿಸ್ತಾರವಾದ "ಕೌಟುಂಬಿಕ ಹಿಂಸೆಯಿಂದ ಮಹಿಳೆಗೆ ರಕ್ಷಣೆ ಮಸೂದೆ - 2005" ಸೆಪ್ಟೆಂಬರ್ 17 ರಿಂದ ಈ ಮಸೂದೆಯು ಕಾನೂನಾಗಿ ಬಂದಿದೆ.

ಮಹಿಳಾ ಸಂಘಟನೆಗಳು, ಮಹಿಳಾವಾದಿಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳ ದೀರ್ಘಕಾಲದ ಹೋರಾಟಕ್ಕೆ ಹಾಗೂ ಬೇಡಿಕೆಗೆ ಫಲ ಸಿಕ್ಕಿದಂತಾಗಿದೆ.

ಕೇವಲ ದೌರ್ಜನ್ಯ ಮಾತ್ರವಲ್ಲದೇ ಮಹಿಳೆಯರ ಮೇಲೆ ನಡೆಯುವ ದೈಹಿಕ, ಲೈಂಗಿಕ, ಮಾನಸಿಕ, ಭಾವನಾತ್ಮಕ ಹಾಗೂ ಆರ್ಥಿಕ ಹಿಂಸೆಯು / ದೂಷಣೆಯು ಸಹ ಈ ಸಮಗ್ರ ಮಸೂದೆಯ ವ್ಯಾಪ್ತಿಗೆ ಬರುತ್ತದೆ. ಕಾನೂನಿನಲ್ಲಿರುವ ಲೋಪದೋಷಗಳನ್ನು ತೊಡೆದು ಹಾಕಲು ಕೌಟುಂಬಿಕ ಹಿಂಸೆಗೆ ಒಳಗಾದ ಮಹಿಳೆಗೆ ರಕ್ಷಣೆ ಒದಗಿಸುವ ಈ ಮಸೂದೆಯನ್ನು ಲೋಕಸಭೆಯು ಅಂಗೀಕರಿಸಿದೆ.

ಕೌಟುಂಬಿಕ ದೌರ್ಜನ್ಯ ರಕ್ಷಣೆಯ ಮಸೂದೆಯಲ್ಲಿ ಐದು ಪ್ರಮುಖ ಅಂಶಗಳಿವೆ. ಅವುಗಳು

1. ಹಿಂಸೆ ನೀಡುವ ವ್ಯಕ್ತಿ ಮದುವೆ ಅಥವಾ ದತ್ತಕದ ಮೂಲಕ ಮಹಿಳೆಯ ಸಂಬಂಧಿಯಾಗಿದ್ದು, ಈ ಇಬ್ಬರೂ ಒಂದೇ ಸೂರಿನಡಿ ವಾಸಿಸುತ್ತಿದ್ದಲ್ಲಿ ಅಂತಹ ಮಹಿಳೆಗೆ ಕಾಯ್ದೆ ರಕ್ಷಣೆ ಒದಗಿಸುತ್ತದೆ.

2. ಗಂಡನಿಂದ ಹಿಂಸೆಗೊಳಗಾದ ಮಹಿಳೆ, ಆತನ ಸಹೋದರಿ, ತಾಯಿ, ವಿಧವೆ ಹಾಗೂ ಒಂಟಿ ಮಹಿಳೆಯರಿಗೂ ಸಹ ಈ ಕಾಯ್ದೆಯಡಿ ರಕ್ಷಣೆ ಪಡೆಯಲಿದ್ದಾರೆ. ಇವರ ಜೊತೆಯಲ್ಲಿ ವಾಸಿಸುವ ಸಂಬಂಧಿಗಳು ಅಂದರೆ ಅವಿಭಕ್ತ ಕುಟುಂಬವು ಸಹ ಕಾಯ್ದೆಯಲ್ಲಿ ಸೇರಿದೆ. ವರದಕ್ಷಿಣೆಯ ಬೇಡಿಕೆ ಮುಂದಿಟ್ಟು ಮಹಿಳೆ ಅಥವಾ ಆಕೆಯ ಸಂಬಂಧಿಗಳಿಗೆ ಕಿರುಕುಳ ನೀಡುವವರ ವಿರುದ್ಧ ಕಾನೂನು ಕ್ರಮ ಜರುಗಿಸಬಹುದಾಗಿದೆ.

3. ವಾಸಸ್ಥಾನದ ಮೇಲೆ ಮಹಿಳೆಗೆ ಇರುವ ಹಕ್ಕನ್ನು ಈ ಮಸೂದೆಯಡಿ ರಕ್ಷಿಸಲಾಗಿದೆ. ವಿವಾಹಿತ ಮಹಿಳೆಗೆ ತವರು ಮನೆಯ ಆಸ್ತಿಯಲ್ಲಿ ಪಾಲು / ಭಾಗ ದೊರಕದಿದ್ದರೂ ತವರು ಮನೆಯಲ್ಲಿ ವಾಸಿಸಲು ಆಕೆಗೆ ಹಕ್ಕು ಇದೆ ಎಂದು ಮಸೂದೆ ಹೇಳಿದೆ. ಮ್ಯಾಜಿಸ್ಟ್ರೇಟ್ ಅವರು ಆದೇಶ ಹೊರಡಿಸುವ ಮೂಲಕ ಮಹಿಳೆ ಈ ಹಕ್ಕನ್ನು ಪಡೆದುಕೊಳ್ಳಬಹುದಾಗಿದೆ.

4. ಮಹಿಳೆಗೆ ಕಿರುಕುಳ ನೀಡುವ ವ್ಯಕ್ತಿ, ಆಕೆಯ ಉದ್ಯೋಗ ಸ್ಥಳದಲ್ಲಿ ಬಂದು ಬೆದರಿಸುವುದು ಅಥವಾ ಆಕೆಗೆ ನೆರವು ನೀಡುವ ಸಂಬಂಧಿಗಳ ಮತ್ತು ಸ್ನೇಹಿತರಿಗೆ ಬೆದರಿಕೆ ಹಾಕುವವರ ವಿರುದ್ಧ ಆದೇಶ ಹೊರಡಿಸಿ ರಕ್ಷಣೆ ನೀಡುವ ಅಧಿಕಾರವನ್ನು ಮ್ಯಾಜಿಸ್ಟ್ರೇಟ್ ಅವರಿಗೆ ನೀಡಲಾಗಿದೆ.

5. ದೌರ್ಜನ್ಯಕ್ಕೊಳಗಾದ ಮಹಿಳೆ ವೈದ್ಯಕೀಯ ತಪಾಸಣೆಗೆ ಒಳಪಡಲು, ಕಾನೂನು ನೆರವು ಪಡೆಯಲು ಸುರಕ್ಷಿತ ಸೂರಿನಡಿ ಇರುವಂತೆ ನೋಡಿಕೊಳ್ಳಲು ರಕ್ಷಣಾ ಅಧಿಕಾರಿಗಳ ನೇಮಕಕ್ಕೆ ಸೂಚಿಸಿದೆ.

ಕೌಟುಂಬಿಕ ದೌರ್ಜನ್ಯವನ್ನು ಕಾಯ್ದೆಯ ವ್ಯಾಪ್ತಿಗೆ ಒಳಪಡಿಸಿರುವುದು ಸ್ವಾಗತಾರ್ಹ. ಇದು ದೌರ್ಜನ್ಯಕ್ಕೆ ಒಳಗಾದ ಮಹಿಳೆಯರಿಗೆ ತುರ್ತಾಗಿ ಪರಿಹಾರ ಒದಗಿಸುವುದಲ್ಲದೇ ಇವರ ಪರವಾಗಿ ಕೆಲಸ ಮಾಡುವ ಸ್ವಯಂ ಸೇವಾ ಸಂಸ್ಥೆ (NGO's) ಗಳಿಗೂ ಈ ಕಾಯ್ದೆ ರಕ್ಷಣೆ ನೀಡುತ್ತದೆ. ಮಹಿಳೆಯ ಅಸಹಾಯಕತೆಯನ್ನು ದುರುಪಯೋಗ ಪಡಿಸಿಕೊಳ್ಳುವಂತ ಪ್ರವೃತ್ತಿಗೆ ಈ ಮಸೂದೆ ಕಡಿವಾಣ ಹಾಕಬಹುದು.

1997-98 ರಲ್ಲಿ ರಾಷ್ಟ್ರೀಯ ಮಹಿಳಾ ಆಯೋಗ ಈ ಕಾಯ್ದೆಗೆ ಬೀಜ ಬಿತ್ತುವ ಮೂಲಕ ಮೊದಲನೆ ಕರಡು ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸಿತ್ತು. ಮಹಿಳೆ ಮೇಲೆ ದಿನನಿತ್ಯ ನಡೆಯುವ ದೌರ್ಜನ್ಯಕ್ಕೆ ಒಂದು ಸಮಗ್ರವಾದಂತಹ ಕಾಯ್ದೆಯನ್ನು ತರುವಂತೆ ಒತ್ತಾಯಿಸಿ ಮಹಿಳಾ ಸಂಘಟನೆಗಳು ದೇಶದಾದ್ಯಂತ ಆಂದೋಲನ ಮಾಡಿದ್ದವು. ಅದು ಸಿವಿಲ್ ಕಾನೂನುಗಳಿಗೆ ಈ ಮಸೂದೆಯನ್ನು ಮೊದಲ ಬಾರಿಗೆ 2001 ಮಾರ್ಚ್‌ರಲ್ಲಿ ಸಂಸತ್‌ನಲ್ಲಿ ಇಟ್ಟಾಗ ಮಾನವ ಹಕ್ಕುಗಳ Standing Committee ಅಭಿವೃದ್ಧಿಯು ಈ ಮಸೂದೆಯನ್ನು ವಿಶ್ಲೇಷಿಸಿ ಚರ್ಚಿಸಿತು. ಅದು ಪರಿಕಲ್ಪನೆಯ ದೃಷ್ಟಿಯಿಂದ ಹಾಗು ಅಪರಾಧ ಎಸಗಿದವರ ವಿರುದ್ಧ ಶಿಕ್ಷೆ ವಿಧಿಸಲು ಇರುವಂತಹ ಸಾಧ್ಯ ಸಾಧ್ಯತೆಗಳ ಕುರಿತು ಚರ್ಚಿಸಿತು. ಅಲ್ಲಿಂದ ಹೊರ ಬಂದ ಫಲಿತಾಂಶದ ಕುರಿತ ಪ್ರತಿಗಳನ್ನು ವಿವಿಧ ಸಚಿವಾಲಯಗಳಿಗೆ ಒಂದು ವರ್ಷದ ಹಿಂದೆಯೇ ಹಂಚಲ್ಪಟ್ಟಿತ್ತು. ಕೊನೆಗೂ ಕೇಂದ್ರ ಸಂಪುಟದ ಒಪ್ಪಿಗೆ ಪಡೆದಿದೆ.

ಸಮಾಜದಲ್ಲಿ ಕೌಟುಂಬಿಕ ದೌರ್ಜನ್ಯವು ತುಂಬಾ ಅಪಾಯಕರ ಹಾಗೂ ದ್ರೋಹದ ಮಾದರಿಯ ಹಿಂಸೆಯಾಗಿದೆ. ಇದರ ವಿರುದ್ಧ ಮಹಿಳೆ ಒಂಟಿಯಾಗಿ ಪ್ರತಿಭಟಿಸಲು ಸಾಧ್ಯವಿಲ್ಲ. ಒಂದು ಕಡೆ ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾಗಿ ಮಹಿಳೆ ಹಿಂಸೆಯನ್ನು ಮೌನವಾಗಿ ಸಹಿಸಿಕೊಳ್ಳುತ್ತಾಳೆ. ಮತ್ತೊಂದು ಕಡೆ ಆರ್ಥಿಕವಾಗಿ ಇತರರ ಮೇಲೆ ಅವಲಂಬಿತವಾಗಿರುವುದು. ಮಹಿಳೆಯ ಮೇಲೆ ದೌರ್ಜನ್ಯ ನಡೆಯುತ್ತಿದೆ ಎಂದು ಅಕ್ಕ ಪಕ್ಕದ ಮನೆಯವರಿಗೆ ಹಾಗೂ ಸಂಬಂಧಿಕರಿಗೂ ಗೊತ್ತಿದ್ದರೂ ಸಹ ಇದು ಅವರ ಅಂತರಿಕ / ಸಂಸಾರದ ವಿಷಯ ಎಂದು ಯಾರೂ ತಲೆಹಾಕುವುದಿಲ್ಲ. ಅಂತಿಮವಾಗಿ ದುಃಖ ಅನುಭವಿಸುವುದು ದೌರ್ಜನ್ಯಕ್ಕೆ ಒಳಗಾದ ಮಹಿಳೆಯೇ ! ಈಗಿರುವ ಕಾನೂನುಗಳಿಂದ ನ್ಯಾಯಾಲಯಗಳು ಸರಿಯಾದ ಶಿಕ್ಷೆಯನ್ನು ವಿಧಿಸಲು ಆಗುತ್ತಿಲ್ಲ. ಏಕೆಂದರೆ ಇದು ಮನೆಯ ಒಳಗೆ ನಡೆಯುವ ಹಿಂಸೆಯಾಗಿದೆ. ಸಾಕ್ಷಿ ಸಮೇತ ನಿರೂಪಿಸಲು ಸಾಧ್ಯವಾಗುವುದಿಲ್ಲ.

ಹೀಗೆ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯದ ವಿರುದ್ಧ ಈಗಾಗಲೇ ಹಲವಾರು ಕಾಯ್ದೆಗಳು ಇದ್ದರೂ ಸಹ ಸಮಗ್ರವಾದ ಒಂದು ಮಸೂದೆಯ ಅವಶ್ಯಕತೆ ಇತ್ತು. ಈ ನಿಟ್ಟಿನಲ್ಲಿ ಕೌಟುಂಬಿಕ ದೌರ್ಜನ್ಯ ರಕ್ಷಣೆ ಮಸೂದೆಯು ಒಂದು ದಿಟ್ಟ ಹೆಜ್ಜೆ ಇಡುವಂತಾಗಲಿ. ಕೇವಲ ಕಾಯ್ದೆ ರೂಪಿಸುವುದರಿಂದ ಮಹಿಳೆಯರ ಸಮಸ್ಯೆಗಳು ಪರಿಹಾರವಾಗುವುದಿಲ್ಲ. ಈ ಕಾಯ್ದೆಗಳ ಪರಿಣಾಮಕಾರಿ ಅನುಷ್ಠಾನಕ್ಕೆ ಆಸ್ಪದ ಕಲ್ಪಿಸುವುದು ಅಗತ್ಯ. ಇಂತಹ ಮೊಕದ್ದಮೆಗಳು ತ್ವರಿತವಾಗಿ ಇತ್ಯರ್ಥವಾಗಬೇಕು. ನೊಂದವರಿಗೆ ನ್ಯಾಯ ಸಿಗುವಂತಾಗಬೇಕು. ರಾಜ್ಯ ಸರ್ಕಾರಗಳು ಸಹ ಸೂಕ್ತವಾದ ವ್ಯವಸ್ಥೆಯನ್ನು ರೂಪಿಸಬೇಕಾಗುತ್ತದೆ. ಕೇವಲ ಕಾಗದದ ಮೇಲಷ್ಟೆ ಇರದೇ ಮಹಿಳೆಯರಿಗೆ ತ್ವರಿತವಾಗಿ ನ್ಯಾಯಸಿಗುವಂತಾಗಲಿ ಎಂದು ಆಶಿಸೋಣವೇ ?!

- ಶ್ಯಾಮಲ, ಕೋಲಾರ.

# ಆತ್ಮಹತ್ಯೆಯೇ ಪರಿಹಾರವಾಗಿತ್ತೆ?

ಇಬ್ಬರು ಮಕ್ಕಳನ್ನು ಕೊಂದು ತಾನೂ ಆತ್ಮ ಹತ್ಯೆ ಮಾಡಿಕೊಂಡ ಕಲೈವಾಣಿಯ ದುರಂತ ಕಥೆ ಇತ್ತೀಚೆಗೆ ದಿನಪತ್ರಿಕೆಗಳಲ್ಲಿ ಮೂಡಿ ಬಂತು. ದೈಹಿಕ ಹಾಗೂ ಮಾನಸಿಕ ಕಿರುಕುಳಕ್ಕೆ ಒಳಗಾದ ಇನ್ನೊಂದು ಹೆಣ್ಣು ಬಿಡುಗಡೆಗೆ ಹುಡುಕಿಕೊಂಡ ದಾರಿ ಇದು.

ಕಲೈವಾಣಿ ಈ ತೊಂದರೆಗಳಿಗೆ ಮುಕ್ತಾಯ ಹಾಡಲು ತಾನು ಅಶಕ್ತಳೆಂದು ತಾನೇ ಪರಿಗಣಿಸಿಕೊಂಡಿದ್ದಳೇ ? ಪದವೀಧರೆಯೂ, ಪ್ರಪಂಚ ಜ್ಞಾನವುಳ್ಳವಳಾಗಿದ್ದೂ, ಆತ್ಮಹತ್ಯೆಯನ್ನು ಪರಿಹಾರವೆಂದು ಪರಿಗಣಿಸಿದ್ದಾದರೂ ಏಕೆ ?

ವರದಕ್ಷಿಣೆ ಕಿರುಕುಳ, ದೈಹಿಕ ಹಿಂಸೆ ಹಾಗೂ ಮಾನಸಿಕ ತೊಳಲಾಟವನ್ನು ಹನ್ನೆರಡು ವರ್ಷಗಳ ಕಾಲ ಸಹಿಸಿಕೊಂಡು, ಗಂಡನ ಕ್ರೂರ ದೃಷ್ಟಿ ಮಕ್ಕಳ ಮೇಲೆ ಬೀಳತೊಡಗಿದಾಗ, ಈ ತಾಯಿಗೆ ಮಕ್ಕಳನ್ನು ಕೊಲ್ಲುವುದೇ ಬಿಡುಗಡೆಯ ದಾರಿಯಾಯಿತೆ ? ಒಬ್ಬ ತಾಯಿ ತನ್ನ ಕರುಳಿನ ಕುಡಿಗಳನ್ನು ಚಿವುಟುವ ತೀರ್ಮಾನ ತೆಗೆದುಕೊಳ್ಳಬೇಕಾದರೆ ಆಕೆ ಎಷ್ಟರ ಮಟ್ಟಕ್ಕೆ ಹತಾಶಳಾಗಿರಬೇಕು? ಯಾರಲ್ಲೂ ತನ್ನ ಅಳಲನ್ನು ತೋಡಿಕೊಳ್ಳಲಾರದೆ, ತನ್ನನ್ನೂ, ತನ್ನ ಮಕ್ಕಳನ್ನೂ ಗಂಡನ ದ್ವೇಷದ ಬಿಗಿತದಿಂದ ಬಿಡಿಸಿಕೊಳ್ಳಲು ಹೆಣಗಾಡಿ, ಕಡೆಗೆ ತನ್ನ ಮುದ್ದು ಮಕ್ಕಳಾದ ಪೂಜಾ (10 ವರ್ಷ) ಹಾಗೂ ಮೊನಿಷಾ (7ವರ್ಷ)ರನ್ನು ಉಸಿರುಕಟ್ಟಿ ಸಾಯಿಸಿ, ತಾನೂ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ತಂದೆಗೆ ತಿಳಿಸಿ ನೇಣು ಹಾಕಿಕೊಂಡು ಶಾಶ್ವತವಾಗಿ ಬಿಡುಗಡೆ ಪಡೆದುಕೊಂಡ ನತದೃಷ್ಟ ಮಹಿಳೆ ಕಲೈವಾಣಿ.

ಇವು ಬಹಳಷ್ಟು ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳು, ಕೆಲವರು ಧೈರ್ಯದಿಂದ ಎದುರಿಸುತ್ತಿದ್ದಾರೆ, ಇನ್ನೂ ಕೆಲವರು ಸಮಾಜಕ್ಕೆ ಹೆದರಿ ಅಥವಾ ಮನೆಯವರ ಬಲವಂತಕ್ಕೆ ಇದನ್ನು ಸಹಿಸಿಕೊಳ್ಳುತ್ತಿದ್ದರೆ, ಇನ್ನೂ ಕೆಲವರು ಯಾವುದನ್ನೂ ಎದುರಿಸಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ನಮಗೆ ವಿವಿಧ ಮಾಧ್ಯಮಗಳ ಮೂಲಕ ಓದಲು/ ಕೇಳಲು ಸಿಗುತ್ತಿದೆ. ಇಂತಹ ತೊಂದರೆಗಳಿಗೆ ಆತ್ಮಹತ್ಯೆಯೇ ಪರಿಹಾರವೇ ? ಅಲ್ಲ-ಹೆಣ್ಣು ತನ್ನನ್ನು ಅಬಲೆಯೆಂದು ಪರಿಗಣಿಸಿಕೊಳ್ಳದೆ, ಈ ತೊಂದರೆಗಳನ್ನು ಧೈರ್ಯಗೆಡದೆ ಪರಿಹರಿಸಿಕೊಳ್ಳುವಂತಿರಬೇಕು. ಬಹಳಷ್ಟು ಮಹಿಳೆಯರು ವಿದ್ಯೆಯೆಂಬ ಶಕ್ತಿಯನ್ನು ಹೊಂದಿದ್ದರೂ, ತಾವು ಪುರುಷನಿಗಿಂತ ಕಡಿಮೆಯೆಂದೂ, ಪುರುಷನ ಮುಂದೆ ಅಶಕ್ತರೆಂದೂ ತಮ್ಮ ಶಕ್ತಿಯನ್ನು ನಿರ್ಲಕ್ಷಿಸಿಕೊಂಡು ಜೀವನವನ್ನು ಸಾಗಿಸುತ್ತಿರುವುದನ್ನು ನಮ್ಮ ಸಮಾಜದಲ್ಲಿ ಕಾಣಬಹುದು. ಎಷ್ಟೋ ಸಂಸಾರಗಳಲ್ಲಿ

ಪುರುಷನ ಮೇಲಿನ ಆರ್ಥಿಕ ಅವಲಂಬನೆ ಹೆಣ್ಣನ್ನು ಮೂಲೆಗುಂಪಾಗಿಸಿರುವುದೂ ನಿಜ. ಮಹಿಳೆಯರು ತಮ್ಮ ಕಾಲ ಮೇಲೆ ನಿಂತು, ಸಂಸಾರದ ಆರ್ಥಿಕ ಗುಣಮಟ್ಟವನ್ನು ಸುಧಾರಿಸಬಹುದು, ಹಾಗೆಯೇ ಅವಶ್ಯಕತೆ ಇದ್ದಲ್ಲಿ ತಮ್ಮ ಜೀವನವನ್ನು ತಮ್ಮ ದುಡಿಮೆಯಲ್ಲೇ ಸಾಗಿಸಬಹುದು.

ಕಲ್ಯೆವಾಣಿಯ ಸಮಸ್ಯೆಯನ್ನು ನೋಡಿದಾಗ, ಪದವೀಧರೆಯಾಗಿದ್ದ ಈಕೆ, ಯಾವುದಾದರೂ ಉದ್ಯೋಗವನ್ನು ಅವಲಂಬಿಸಿ ತನ್ನ ಮಕ್ಕಳೊಂದಿಗೆ ಸುಖವಾಗಿ ಜೀವನ ಸಾಗಿಸಬಹುದಿತ್ತು. ಪತಿ ನೀಚನೆಂದು ತಿಳಿದಿದ್ದರೂ, ಸಂಸಾರವನ್ನು ತೂಗಿಸುತ್ತಿದ್ದ ತಾಳ್ಮೆಯ ಜೀವಿ ಈಕೆ. ಹೆತ್ತ ಮಗಳನ್ನೇ ಬಳಸಿಕೊಂಡು ತನ್ನ ಕಾಮವನ್ನು ಪೂರೈಸಿಕೊಳ್ಳಲು ಪ್ರಾರಂಭಿಸಿದಾಗ, ತನ್ನ ಎರಡು ಹೆಣ್ಣು ಮಕ್ಕಳನ್ನು ಕಾಪಾಡಿಕೊಳ್ಳಲು ಅಸಹಾಯಕಳಾಗಿ, ಸಮಾಜದಲ್ಲಿ ತನ್ನ ಸಂಸಾರ ನಗೆಪಾಟಲಾಗದಿರಲೆಂದು ಈಕೆ ಮಕ್ಕಳನ್ನು ಕೊಂದು ತಾನೂ ಆತ್ಮಹತ್ಯೆಮಾಡಿಕೊಂಡಳು. ಈ ಕಷ್ಟಗಳು ಈಕೆಗೆ ಪ್ರತಿದಿನದ ಸಾವಾಗಿತ್ತು. ಪತಿಯಿಂದ ದೂರವಾಗಿ, ಪೋಷಕರೊಡನೆಯೋ, ಇಲ್ಲವೇ ಸ್ವತಂತ್ರಳಾಗಿ ತನ್ನ ಜೀವನವನ್ನು ಸಾಗಿಸಬಹುದಿತ್ತು. ಈಕೆ ಸಮಾಜಕ್ಕೆ ಹೆದರಿದ್ದಳೇ? ಸಂಸಾರದಿಂದ ಹೊರಗಾದಾಗ ತನ್ನ ಮಕ್ಕಳ ಭವಿಷ್ಯ ಹಾಳಾಗುತ್ತದೆ ಎಂಬ ಆತಂಕವಿತ್ತೆ ? ನಂಬಿ ಬಂದವನೇ ದುರಾಚಾರಿಯಾದನೆಂಬ ತಿರಸ್ಕಾರದಿಂದ ಹೀಗೆ ಮಾಡಿದ್ದಳೆ ? ಇಂತಹ ಎಷ್ಟೋ ಪ್ರಶ್ನೆಗಳು ಪ್ರಶ್ನೆಯಾಗಿಯೇ ಉಳಿದು ಹೋಗಿದೆ. ಎಷ್ಟೋ ಜನ, ಸಂಬಂಧಿಗಳಲ್ಲಿ, ಸ್ನೇಹಿತರಲ್ಲಿ, ಈಕೆಯ ದುರಂತ ಕಥೆಯನ್ನು ಕೇಳಿ ಕಣ್ಣೀರು ಸುರಿಸಿದ್ದು ನಿಜ. ಆದರೆ ಹೆಣ್ಣು ಮಕ್ಕಳು ಕಣ್ಣೀರು ಸುರಿಸದೆ, ಇದರಿಂದ ಕಲಿಯಬೇಕಾಗಿರುವ ಪಾಠಗಳು ಬಹಳಷ್ಟಿವೆ.

- ದೌರ್ಜನ್ಯ, ಹಿಂಸೆ, ಯಾವುವನ್ನೂ ಸಹಿಸಿಕೊಳ್ಳುವ ಅವಶ್ಯಕತೆ ಇಲ್ಲ.
- ನಿಮ್ಮ ಅಧಿಕಾರಕ್ಕಾಗಿ ಪ್ರತಿಭಟಿಸಿ
- ಹೆಣ್ಣು ಅಬಲೆಯಲ್ಲ. ಮನಸ್ಸು ಮಾಡಿದಲ್ಲಿ ಏನನ್ನಾದರೂ ಸಾಧಿಸಬಹುದು.
- ಆರ್ಥಿಕ ಸ್ವಾವಲಂಬನೆ ಬಹಳ ಮುಖ್ಯ
- ಸಮಾಜಕ್ಕೆ ಹೆದರಿ ದೌರ್ಜನ್ಯವೆಸಗುವವನನ್ನು ಅನುಸರಿಸಿಕೊಂಡು ಹೋಗುವುದು ಹೇಡಿತನ.
- ಪರಿಸ್ಥಿತಿ ಮಿತಿಮೀರಿದಾಗ ಸ್ವತಂತ್ರವಾಗಿ ಬದುಕುವ ಧೈರ್ಯ ತಳೆದುಕೊಳ್ಳಿ.
- ನಿಮ್ಮಲ್ಲಿರುವ ಕಲೆಯನ್ನು ಗುರುತಿಸಿಕೊಂಡು ಸ್ವ ಉದ್ಯೋಗಿಗಳಾಗಿ
- ತರಬೇತಿಗಳನ್ನು ನೀಡಲು, ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡಲು ಎಷ್ಟೋ ಸಂಸ್ಥೆಗಳು ಶ್ರಮಿಸುತ್ತಿವೆ. ಅವುಗಳ ಸೇವೆಯನ್ನು ಪಡೆದುಕೊಂಡು ಸ್ವಾವಲಂಬಿಗಳಾಗಿ.
- ಅವಶ್ಯವಿದ್ದಲ್ಲಿ ಕಾನೂನು ಸಲಹೆ ಪಡೆದುಕೊಂಡು ಪರಿಸ್ಥಿತಿಗೆ ಅನುಗುಣವಾಗುವ ತೀರ್ಮಾನಗಳನ್ನು ತೆಗೆದುಕೊಳ್ಳಿ.
- ಹೆಣ್ಣು ಮಕ್ಕಳು ಅಶಕ್ತರಲ್ಲ, ನಿಮ್ಮ ಶಕ್ತಿಯನ್ನು ಸದ್ಬಳಕೆ ಮಾಡಿಕೊಂಡು ಅರ್ಥಪೂರ್ಣ ಜೀವನ ನಡೆಸಿರಿ.
- ನಿಮ್ಮ ಮಕ್ಕಳಿಗೆ 5 ವರ್ಷವಾದಾಗಿನಿಂದ, ಕ್ರಮೇಣವಾಗಿ ಅವರಿಗೆ ಅರ್ಥವಾಗುವ ಮಟ್ಟದಲ್ಲಿ ತಮ್ಮ ಶರೀರ ಹಾಗೂ ಅದನ್ನು ಹೇಗೆ ದುರ್ಬಳಕೆಯಾಗದಂತೆ ಕಾಪಾಡಿಕೊಳ್ಳಬೇಕೆಂದು ತಿಳಿಸಿಕೊಡಿ.

ಕಲ್ಯೆ ವಾಣಿ ಎದುರಿಸಿದ ಕಷ್ಟಗಳನ್ನು ಇನ್ನೂ ಎಷ್ಟೋ ಹೆಣ್ಣು ಮಕ್ಕಳು ಎದುರಿಸುತ್ತಿರಬಹುದು. ಈ ತೊಂದರೆಗಳಿಗೆ ಆತ್ಮಹತ್ಯೆ ಪರಿಹಾರವಲ್ಲ ವೆಂದು ತಿಳಿದುಕೊಳ್ಳಿ. ನಿಮ್ಮ ಜೀವನ ಮೌಲ್ಯವನ್ನು ಅರಿತುಕೊಂಡು, ಧೈರ್ಯದಿಂದ ಸಮಾಜದಲ್ಲಿ ನೀವೂ ಬದುಕಬಹುದು, ಗೌರವ, ಸ್ಥಾನ ಮಾನಗಳನ್ನು ಸಂಪಾದಿಸಿಕೊಳ್ಳಬಹುದೆಂದು ಸಾಧಿಸಿತೋರಿಸುವಂತಾಗ ಬೇಕು. ಇತರ ಹೆಣ್ಣುಮಕ್ಕಳಿಗೂ, ಸಮಾಜಕ್ಕೂ ಮಾದರಿಯಾಗಿ ಜೀವನ ಸಾಧಿಸುವಂತಾಗಬೇಕು. ಈ ಹೆಣ್ಣುಮಕ್ಕಳಿಗೆ ಧೈರ್ಯ ತುಂಬಿ. ಇವರಿಗೆ ಬೇಕಾಗಿರುವುದು ಸಹಾನುಭೂತಿಯಲ್ಲ. ಈ ಕಥೆಯನ್ನು ಮರೆಯಬೇಡಿ, ನೀವೂ ಇನ್ನೊಬ್ಬ ಕಲ್ಯೆವಾಣಿಯಾಗದೆ, ಧೈರ್ಯದಿಂದ ಮುನ್ನುಗ್ಗಿ, ಒಂದು ಸುಂದರ ಜೀವನವನ್ನು ನಿಮಗಾಗಿ ರೂಪಿಸಿಕೊಳ್ಳಿ.

**ನಂದಿನಿ ವಿಶ್ವನಾಥ್,**
ಬೆಂಗಳೂರು

# ನಾನಿಲ್ಲದೆ ಊರಿಲ್ಲ

ಚುಮು ಚುಮು ನಸುಕಿನಲ್ಲಿ
ಮುಂಜಾವಿನ ಮುಸುಕಿನಲ್ಲಿ
ಸೂರ್ಯನ ಚಲ್ಲಾಟದಲ್ಲಿ
ಬದುಕಿನ ಬಯಲಾಟದಲ್ಲಿ

ನಾ ಹಿಡಿದೆ ಆಯುಧಗಳ
ಪೊರಕೆ, ತಳ್ಳುಗಾಡಿನ ಕಾಯಿದೆಗಳ
ಬೀದಿ, ಬೀದಿ ಗಲ್ಲಿ ಗಲ್ಲಿಗಳಲ್ಲಿ
ನನ್ನ ಸ್ವಚ್ಛ ಆಂದೋಲನ
ಮನಸ್ಸಿನ ಡೋಲಾಯನ

ನಾನಿಲ್ಲದೆ ಊರಿಲ್ಲ
ಸುಂದರ ನಗರವಿಲ್ಲ
ನಾನು ಎಲ್ಲರಿಗೂ ಬೇಕು
ನನಗೆ ಆರೋಗ್ಯ ಸಾಕು

ನನ್ನ ಕ್ರಿಯೆ ಎಷ್ಟು ಮೇಲು
ಹೇಳಲದು ಸಾಲು ಸಾಲು ........

ಅವರ ನಾಗರೀಕತೆಗೆ
ಕಸದಲ್ಲಿ ಕಸವಾದೆ ನಾನು
ನನ್ನ ಬೆವರಿನ ವಾಸನೆಯಲ್ಲಿ
ಬಿರಿಯುತ್ತಿದೆ ಉದ್ಯಾನವನ

ಹೊಗಳುವರು ನಾಡ ನೋಡಿ
ನಾ ಸೊರಗಿದೆ, ಕೊರಗಿದೆ ನರಳಿದೆ
ಹಸಿವು ಧೂಳು ಉಗಳುರೋಗದಿಂದ
ನಾನಾದೆ ಕೊಳಕು
ಊರಾಯಿತು ಥಳಕು ಬಳುಕು
ನಾನಿಲ್ಲದೆ ಊರಿಲ್ಲ, ಸುಂದರ ನಗರವಿಲ್ಲ.

"ಬೇಕೇ ಬೇಕು ನ್ಯಾಯಬೇಕು". "ಹೋರಾಟ ಹೋರಾಟ, ಎಲ್ಲಿಯವರೆಗೂ ಹೋರಾಟ ಗೆಲ್ಲುವವರಿಗೂ ಹೋರಾಟ", "ಧಿಕ್ಕಾರ ಧಿಕ್ಕಾರ ಭ್ರಷ್ಟ ಅಧಿಕಾರಿಗಳಿಗೆ ಮತ್ತು ರಾಜಕಾರಣಿಗಳಿಗೆ ಧಿಕ್ಕಾರ", ಈ ಘೋಷಣೆ ಬೆಂಗಳೂರು ಮಹಾನಗರ ಪಾಲಿಕೆಯ ಎದುರು ದಿನಾಂಕ 12-9-05 ಸಮಯ 4-00 ಗಂಟೆಗೆ ಮಾರ್ದನಿಸುತಿತ್ತು. ಇದು ಯಾರ ಘೋಷಣೆ, ಯಾಕೆ ಈ ಘೋಷಣೆ ? ಎಂಬುದು ಕುತೂಹಲಕಾರಿ.

ಬೆಂಗಳೂರು ಪ್ರಪಂಚದಲ್ಲಿಯೇ ಸುಂದರ ನಗರ ಉದ್ಯಾನ ನಗರ, ಕಿನ್ನರಿ ನಗರ ಎಂಬೆಲ್ಲ ಹೆಸರುಗಳಿಂದ ಪ್ರಸಿದ್ಧಿ ಪಡೆದಿದೆ. ಈ ಪ್ರಸಿದ್ಧತೆಗೆ ಕಾರಣವಾಗಲು ಹಗಲಿರಳು ತಮ್ಮ ಬೆವರನ್ನು ಸುರಿಸಿ ಶ್ರಮಿಸುತ್ತಿರುವ ದಲಿತ ಪೌರಕಾರ್ಮಿಕರ ಈ ಘೋಷಣೆ. ಇದು ಎಷ್ಟು ಸ್ಪಷ್ಟವಾಗಿದೆ ಎಂದರೆ, ಸ್ವಾತಂತ್ರ್ಯ ಪೂರ್ವದಲ್ಲಿ ನಾವು ಬ್ರಿಟಿಷರನ್ನು ಭಾರತದಿಂದ ಓಡಿಸಲು ನೂರಾರು ಧರಣಿ, ಸತ್ಯಾಗ್ರಹ, ಚಳುವಳಿಗಳನ್ನು ಮಾಡಿದೆವು. ಖಂಡಿತವಾಗಿ ಬ್ರಿಟಿಷರು ಭಾರತ ಬಿಟ್ಟು ಓಡಿಹೋದರು. ಆದರೆ ಇಂದು ಈ ಧರಣಿಗಳು ನಮ್ಮ ಭ್ರಷ್ಟಚಾರ ರಾಜಕಾರಣಿ ಮತ್ತು ಅಧಿಕಾರಿಗಳ ವಿರುದ್ಧವಾಗಿತ್ತು.

ನಮ್ಮ ಪೌರ ಕಾರ್ಮಿಕರಿಗೆ ಅನ್ಯಾಯವಾಗುತ್ತಿದೆ ಅದಕ್ಕೆ ಇವರುಗಟ್ಟಿಯಾಗಿ ನ್ಯಾಯ ಕೇಳುತ್ತಿದ್ದಾರೆ. ಈ ಮೇಲಿನ ಘೋಷಣೆಗಳು ಎಷ್ಟು ಎಂದರೆ ಪೌರಕಾರ್ಮಿಕರ ಬೇಡಿಕೆಗಳು ಸಿಲಿಕಾನ್ ಸಿಟಿಯಷ್ಟು ದುಬಾರಿಯಾದವುಗಳಲ್ಲ, ಮನುಷ್ಯ ತನ್ನ ಜೀವನ ಸಾಗಿಸಲು ಬೇಕಾದ ಅತಿ ಅಗತ್ಯ ಬೇಡಿಕೆಗಳು ಇವು. ಜಯಮ್ಮ ಎನ್ನುವ ಒಬ್ಬ ಪೌರಕಾರ್ಮಿಕ ಮಹಿಳೆ ಎದ್ದು ನಿಂತು ಸಹಾಯಕ ಆಯುಕ್ತರಿಗೆ, "ಸರ್ ನಿಮ್ಮ ಮನೆಯಲ್ಲಿ ನಾಯಿ ಇದೆಯಾ? ಅದಕ್ಕೆ ನೀವು ಎಷ್ಟು ಖರ್ಚು ಮಾಡುತ್ತೀರಿ?" ಎಂದು ಕೇಳಿದಳು. ಅವಳ ಈ ಪ್ರಶ್ನೆಯ ಉದ್ದೇಶವೇನೆಂದರೆ ಆ ನಾಯಿಗೆ ಖರ್ಚು ಮಾಡುವ ಹಣವನ್ನಾದರೂ ನಮಗೆ ತಿಂಗಳ ಸಂಬಳವಾಗಿ ಕೊಡುತ್ತಿಲ್ಲವಲ್ಲಾ ಎಂಬ ವೇದನೆ ಇವಳಾದ್ದಾಗಿತ್ತು.

ಕಾನೂನು ಎಲ್ಲರಿಗೂ ನ್ಯಾಯವನ್ನು ಒದಗಿಸುದಕ್ಕೆ ಮಾಡಿರುವುದು. ನಾವು ನಮ್ಮ ಸಂವಿಧಾನದಲ್ಲಿ ಅನುಚ್ಛೇದ 21 ರ ಪ್ರಕಾರ ಪ್ರತಿಯೊಬ್ಬ ಭಾರತದ ಪ್ರಜೆಗೂ ಜೀವಿಸುವ ಹಕ್ಕಿದೆ. ಜೀವಿಸುವ ಹಕ್ಕು ಬದುಕುವ ಹಕ್ಕಿನಲ್ಲಿ ಒಳಗೊಂಡಿದೆ. 'ಓಲ್ಗಾ ಟೇಲಿಸ್ Vs ಬೊಂಬಾಯಿ ಮುನ್ಸಿಪಾಲಿಟಿ ಕಾರ್ಪೊರೇಷನ್' ಮೊಕದ್ದಮೆಯಲ್ಲಿ ಹೇಳಿರುವುದೂ ಇದೇ. ಪ್ರತಿಯೊಬ್ಬರಿಗೂ ಜೀವಿಸುವ ಹಕ್ಕಿದೆ. ಜೀವಿಸುವ ಹಕ್ಕು ಬದುಕಿನ ಹಕ್ಕಿನಲ್ಲಿ ಒಳಗೊಂಡಿದೆ. ಜೀವಿಸುವ ಹಕ್ಕು ಘನತೆ ಗೌರವದಿಂದ ಇರಬೇಕೇ ಹೊರತು ಪ್ರಾಣಿಗಳಂತೆ ಅಲ್ಲ ಎಂಬುವುದು ಈ ಮೊಕದ್ದಮೆಯ ನಿರ್ಣಯ.

ಮೇಲೆ ಜಯಮ್ಮ ಹೇಳಿದ ಮಾತುಗಳಿಂದ ನಮಗೆ ಕಂಡು ಬರುವುದೇನೆಂದರೆ ಜೀವಿಸುವ ಹಕ್ಕು ಪೌರಕಾರ್ಮಿಕರಿಗೆ ಉಲ್ಲಂಘನೆಯಾಗುತ್ತಿದೆ. ಅದು ಹೇಗೆಂದರೆ, ಅವರ

ಮೂಲಭೂತ ಬೇಡಿಕೆಗಳನ್ನು ಪೂರೈಸುವಲ್ಲಿ ವಿಫಲವಾಗುವುದರಿಂದ.

ಹಾಗಾದರೆ ಅವರ ಮೂಲಭೂತ ಬೇಡಿಗಳು ಏನು ? ಅವು ಎಷ್ಟು ದುಬಾರಿಯಾದವು ಎನ್ನುವುದಕ್ಕೆ. "ಹೈಟೆಕ್ ಸಿಟಿ ಲೋಟೆಕ್ ಸಂಬಳ" ಎನ್ನುವ ವಾಕ್ಯದಲ್ಲಿ ಕಂಡು ಬರುತ್ತದೆ. ಇವರ ಬೇಡಿಕೆಗಳು ತೀರಾ ಸಾಮಾನ್ಯವಾದವು ಮತ್ತು ಅವರ ಬದುಕಿಗೆ ಅತಿ ಅವಶ್ಯಕವಾದವು. ಅವು ಈ ಕೆಳಗಿನಂತಿವೆ.

1. ಅಮಾನವೀಯ ವಂಚಕ ಗುತ್ತಿಗೆ ವ್ಯವಸ್ಥೆಯನ್ನು ರದ್ದು ಮಾಡುವುದು.
2. ಕನಿಷ್ಠ ಮಾಸಿಕ ವೇತನ ರೂ. 4,000/- ಸರಿಯಾಗಿ ಭರಿಸುವುದು, ರಜೆ, ಪಿಂಚಣಿ ಆರೋಗ್ಯ ಸೌಲಭ್ಯ ಇತ್ಯಾದಿ ಮತ್ತು ಖಾಯಂ ನೌಕರರ ಸೌಲಭ್ಯಗಳಂತೆ, ಗುತ್ತಿಗೆ ಕಾರ್ಮಿಕರ ಸೌಲಭ್ಯಗಳನ್ನು ಒದಗಿಸುವುದು.
3. ಹಣ ಸೋರುವಿಕೆಯನ್ನು ತಡೆಗಟ್ಟಲು ವೇತನವನ್ನು ಚೆಕ್ ಮೂಲಕವೇ ಪಾವತಿಸುವುದು ಮತ್ತು ಕಾರ್ಮಿಕರ, ಹೆಸರು, ಸಂಬಳ, ಇತ್ಯಾದಿ ವಿವರಗಳನ್ನು ನೀಡುವುದು.
4. ಕುಡಿಯುವ ನೀರು, ಶೌಚಾಲಯ, ಶಿಶು ಪಾಲನೆ ಕೇಂದ್ರಗಳನ್ನು ಕೂಡಲೇ ಜಾರಿಗೊಳಿಸುವುದು.
5. ಮಹಿಳಾ ಕಾರ್ಮಿಕರ ಮೇಲಿನ ಲೈಂಗಿಕ ಕಿರುಕುಳ ಮತ್ತು ದೌರ್ಜನ್ಯವನ್ನು ತಡೆಯಲು ಸೂಕ್ತ ಕ್ರಮ ಜಾರಿಗೊಳಿಸುವುದು.
6. ಪ್ರತಿ ತಿಂಗಳು 10ನೇ ತಾರೀಖಿನ ಒಳಗೆ ನಿಗದಿತ ಸ್ಥಳದಲ್ಲಿ ನಿಗದಿತ ಸಮಯದಲ್ಲಿ ಸೂಕ್ತ ಅಧಿಕಾರಿಗಳ ಎದುರು ವೇತನವನ್ನು ಚೆಕ್ ಮೂಲಕ ನೀಡುವುದು.
7. ಸಾಕ್ಷರತೆ, ಸ್ವ ಸಹಾಯ ಸಂಘಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದು ಮತ್ತು ಉಚಿತ ಬಸ್‌ಪಾಸುಗಳನ್ನು ನೀಡ ಬೇಕು ಎಂದು ಅವರು ಬೇಡಿಕೆಗಳನ್ನು ಸಲ್ಲಿಸಿದರು. ನೀವೇ ಯೋಚಿಸಿ ಇದರಲ್ಲಿ ಯಾವುದಾದರೂ ದುಬಾರಿ ಬೇಡಿಕೆಗಳಿವೆಯೇ ? ಈ ಕನಿಷ್ಠ ಬೇಡಿಕೆಗಳಿಂದ ಅವರು ವಂಚಿತರಾಗಿರುವುದು ಅವರ ಜೀವನಕ್ಕೆ ತುಂಬ ಅನ್ಯಾಯವನ್ನುಂಟು ಮಾಡುತ್ತಿದೆ. ತಮ್ಮ ನ್ಯಾಯಕ್ಕಾಗಿ ಅವರು 'ನಮಗೆ ನ್ಯಾಯ ಬೇಕು' ಎಂದು ಘೋಷಣೆ ಹಾಕುತ್ತಿರುವರು.

ಈ ಧರಣಿ ನಡೆಯುತ್ತಿರುವ ಸಮಯದಲ್ಲಿ ಅದೃಷ್ಟವಶಾತ್ ಆಯುಕ್ತರು ಊರಿನಿಂದ ಹೊರಗೆ ಇದ್ದರು. ಸಹಾಯಕ ಆಯುಕ್ತರು ತಮಾಷೆಯನ್ನು ನೋಡಲು ಬರುವವರ ಹಾಗೆ ಬಂದರು, ಸಂಘದ ಕೆಲವು ಮುಖಂಡರು ತಮ್ಮ ಬೇಡಿಕೆಯನ್ನು ಅವರಲ್ಲಿ ಹೇಳಿಕೊಂಡಾಗ, ಅವರು "ನಿಮ್ಮ ಸಂಬಳದ ಬಗ್ಗೆ ಸರ್ಕಾರದಲ್ಲಿ ಚರ್ಚೆಯಾಗುತ್ತಿದೆ, ಚರ್ಚೆಯಲ್ಲಿ ಆವಿಷಯ ನಿರ್ಣಯವಾದ ತಕ್ಷಣ ನಿಮಗೆ ಗುಲ್ಬರ್ಗಾ ಮಹಾನಗರ ಪಾಲಿಕೆಯಲ್ಲಿ ನೀಡಿದಂತೆ ನಿಮಗೂ ನೀಡುತ್ತೇವೆ" ಎಂದರು. ಇಲ್ಲಿ ನೀವು ಗಮನಿಸಿದ ಬೇಕಾದ ಮುಖ್ಯ ಅಂಶವೇನೆಂದರೆ, ಗುಲ್ಬರ್ಗಾ ಮಹಾನಗರ ಪಾಲಿಕೆ ಈಗಾಗಲೇ ಆ ವ್ಯಾಪ್ತಿಯಲ್ಲಿ ದುಡಿಯುತ್ತಿರುವ ಪೌರ ಕಾರ್ಮಿಕರಿಗೆ ತಿಂಗಳಿಗೆ 4,000/- ರೂಪಾಯಿಯನ್ನು ಕೊಡುತ್ತಿದ್ದಾರೆ. ಇದು ಯಾವ ನ್ಯಾಯ ? ಗುಲ್ಬರ್ಗಾ ಪೌರಕಾರ್ಮಿಕರು ಬೇರೆ ಬೆಂಗಳೂರು ಕಾರ್ಮಿಕರು ಬೇರೆಯೆ ? ಅಥವಾ ಅವರು ಮಾಡುವ ಕೆಲಸ ಬೇರೆ ಬೇರೆಯೆ ? ಅಥವಾ ಅದು ಮುಖ್ಯ ಮಂತ್ರಿ ಧರಂ ಸಿಂಗ್‌ರ ವ್ಯಾಪ್ತಿಯೆಂದು ಅವರಿಗೆ ಆ ಇನಾಮೆ ? ಇದು ನ್ಯಾಯನಾ ? ಯಾವ ಆಧಾರದ ಮೇಲೆ ಈ ರೀತಿ ಕಾನೂನು ಮಾಡಲು ಬರುತ್ತದೆ. ಭಾರತ ಸಂವಿಧಾನ ಅನುಚ್ಛೇದ (14)ರಲ್ಲಿ ವಿವರಿಸುವಂತೆ ಸಮಾನತೆ ಇರಬೇಕು. ಇದು ಎಲ್ಲರನ್ನು ಸಮಾನ ದೃಷ್ಟಿಯಿಂದ ನೋಡುವ ತತ್ವವಾಗಿದೆಯೆ ? ಇದನ್ನು ಇವರುಗಳು ಯೋಚಿಸಬೇಕು.

ಮುಂದಿನ ವಿಷಯದಲ್ಲಿ ನಾಯಕ ಬಾಲಕೃಷ್ಣರವರು 'ಸರ್' ನಮಗೆ ಕನಿಷ್ಠ ಗುತ್ತಿಗೆ ಪೌರಕಾರ್ಮಿಕರ ಹೆಸರು, ಸಂಬಳ, ಕೆಲಸದ ಸಮಯ ಇತ್ಯಾದಿ ವಿವರಗಳ ಪಟ್ಟಿಯನ್ನಾದರೂ ನೀಡಿ, ನಾವು ಈಗಾಗಲೇ 'ಕರ್ನಾಟಕ ಮಾಹಿತಿ ಅಧಿನಿಯಮ 2000, ಇದರ ಪ್ರಕಾರ ಈ ಮಾಹಿತಿ ಕೇಳಿದರೂ ನಮಗೆ ದೊರಕುತ್ತಿಲ್ಲ ಎಂದು ಕೇಳಿದ್ದಕ್ಕೆ, ಅವರ ಉತ್ತರ ಹಾಸ್ಯಾಸ್ಪದವಾಗಿತ್ತು. ಅವರು ಇಲ್ಲ ಆ ಮಾಹಿತಿಗೂ ನಮಗೂ (ಕಾರ್ಪೊರೇಷನಿಗೂ) ಯಾವ ಸಂಬಂಧವಿಲ್ಲ. ನೀವು ನಿಮ್ಮ ಗುತ್ತಿಗೆ ದಾರರಲ್ಲಿ ಕೇಳಿರಿ ಎಂದು ಉತ್ತರಿಸಿದರು. ಅದಕ್ಕಾಗಿಯೇ ಈ ಜನರು ಭ್ರಷ್ಟ ಅಧಿಕಾರಿಗಳಿಗೆ ಕರ್ತವ್ಯ ಲೋಪ ಅಧಿಕಾರಿಗಳಿಗೆ ಧಿಕ್ಕಾರ ಎಂದು ಘೋಷಿಸಿದರು. ಪ್ರತಿಯೊಂದು ಅಧಿಕಾರಿಗಳಿಗೂ ತಮ್ಮ ಸ್ಥಾನವೇನು ? ಅವರ ಕರ್ತವ್ಯವೇನು ? ಅದಕ್ಕೆ ಕಾನೂನಿನ ಇತಿಮಿತಿಗಳೇನು ಎಂದು ತಿಳಿಸಿಕೊಡಲು ಅವರು ಈ ಘೋಷಣೆ ಮಾಡುತ್ತಿದ್ದಾರೆ.

"ಗುತ್ತಿಗೆ ಕಾರ್ಮಿಕರ ಕಾಯ್ದೆ 1971" ಪರಿಚ್ಛೇದ 29 (1) ರಲ್ಲಿ ಪ್ರತಿಯೊಂದು 'ಮುಖ್ಯಯಜಮಾನ' ಯಾರನ್ನು ಗುತ್ತಿಗೆದಾರರನ್ನಾಗಿ ನೇಮಿಸಿಕೊಳ್ಳುತ್ತಾನೋ, ಅವನು ಗುತ್ತಿಗೆ ದಾರಿ ನೇಮಿಸಿಕೊಳ್ಳುವ ಕೆಲಸಗಾರರ ಹೆಸರಿನ ಪಟ್ಟಿಯನ್ನು, ಅವರ ಸಂಬಳ, ಕೆಲಸದ ಸಮಯ ಇತ್ಯಾದಿ ವಿವರಗಳ

ದಾಖಲೆಯನ್ನು ದಾಖಲಿಸ ತಕ್ಕದ್ದು ಅವನ ಅದ್ಯ ಕರ್ತವ್ಯವಾಗಿರುತ್ತದೆ. ಹಾಗೆಯೇ ಪರಿಚ್ಛೇದ 29(2) ರಲ್ಲಿ ಈ ಮಾಹಿತಿಯನ್ನು ತನ್ನ ಎಲ್ಲ ಕಾರ್ಮಿಕರಿಗೂ ಕಾಣುವಂತೆ ಸೂಚನಾ ಫಲಕದಲ್ಲಿ ಲಗತ್ತಿಸುವುದು ಅವರ ಕರ್ತವ್ಯವಾಗಿದೆ. ಈ ಕೆಲಸವನ್ನು ಈ ಅಧಿಕಾರಿಗಳು ಮಾಡಿದ್ದರೆ ಈ ಘೋಷಣೆ ಕೂಗುವ ಅವಶ್ಯಕತೆ ಇರಲಿಲ್ಲ. ಅದಕ್ಕೂ ನಾವು ಈ ಹೆಸರಿನ ಪಟ್ಟಿಗಳ ವಿವರದ ಬಗ್ಗೆ ಯಾಕೆ ಅಷ್ಟು ಗಂಭೀರವಾಗಿ ಚಿಂತಿಸಬೇಕಾಗಿದೆ ಎಂದರೆ ಈ ಗುತ್ತಿಗೆ ಪೌರ ಕಾರ್ಮಿಕರಿಗೆ ಕೆಲಸ ದೊರಕಿದೆ ಎಂದು ಹೇಳಿಕೊಳ್ಳಲು ಯಾವ ಆಧಾರವಿಲ್ಲ. ಗುತ್ತಿಗೆದಾರನು ತನಗೆ ಇಷ್ಟಬಂದಾಗ ಇವರನ್ನು ಕೆಲಸದಿಂದ ತೆಗೆದು ಹಾಕುವುದು. ಕಾನೂನಿನ ಪ್ರಕಾರ ಒಂದು ವಾರ್ಡನಲ್ಲಿ 30 ರಿಂದ 40 ಕಾರ್ಮಿಕರು ಕೆಲಸ ಮಾಡಬೇಕು ಎಂದು ಇಟ್ಟುಕೊಳ್ಳಿ. ಇವರು ಕೇವಲ 10 ರಿಂದ 20 ಕಾರ್ಮಿಕರಿಂದ ಕೆಲಸ ತೆಗೆದುಕೊಳ್ಳುವುದು, ಸರ್ಕಾರಕ್ಕೆ ಮಾತ್ರ ಕಾನೂನಿನ ಪ್ರಕಾರ ಪಟ್ಟಿ ತಯಾರಿಸುವುದು, ಅವರಿಗೆ ನಿಗದಿತ ಸಂಬಳಕ್ಕಿಂತ ಕಡಿಮೆ ಕೂಲಿ ಕೊಡುವುದು ಇತ್ಯಾದಿ ಅನ್ಯಾಯಗಳನ್ನು ತಡೆಯ ಬೇಕಾದರೆ ಈ ದಾಖಲಾತಿಗಳ ಮಾಹಿತಿ ಅವಶ್ಯಕ ಎಂದು ನಾವು ಅಭಿಪ್ರಾಯ ಪಟ್ಟಿರುತ್ತೇವೆ. ಇದು ಅಕ್ಷರಶಃ ಸತ್ಯವಾದ ಸಂಗತಿಯಾಗಿದೆ.

ಮತ್ತು ಈ ಕಾಯಿದೆಯ ಪರಿಚ್ಛೇದ ಐದರಲ್ಲಿ ಗುತ್ತಿಗೆ ಕಾರ್ಮಿಕರ ಅಭಿವೃದ್ಧಿ ಮತ್ತು ಆರೋಗ್ಯ ಕಾರ್ಯಕ್ರಮಗಳ ಬಗ್ಗೆ ತಿಳಿಸುತ್ತದೆ. ಪೌರ ಕಾರ್ಮಿಕರಿಗೂ ಈ ಕಾಯಿದೆ ಅನ್ವಯವಾಗುತ್ತದೆ. ಆದರೆ ಇಂದು ಈ ಕಾರ್ಮಿಕರಿಗೆ ಯಾವ ಸೌಲಭ್ಯಗಳು ದೊರೆಯುತ್ತಿಲ್ಲ. ಕ್ಯಾಂಟೀನ್, ಶೌಚಾಲಯ, ಕುಡಿಯುವ ನೀರು ಪ್ರಥಮ ಚಿಕಿತ್ಸೆ ಸಾಧನಗಳು, ಕೆಲಸಕ್ಕೆ ಸಂಬಂಧಿಸಿದ ಉಪಕರಣಗಳು ಇತ್ಯಾದಿ ಒದಗಿಸಬೇಕೆಂದು ಕಾನೂನು ತಿಳಿಸುತ್ತದೆ. ಆದರೆ ಈ ಸೌಲಭ್ಯಗಳನ್ನು ಜಾರಿಗೊಳಿಸುವುದರಲ್ಲಿ ನಮ್ಮ ಅಧಿಕಾರಿಗಳು ವಿಫಲವಾಗುತ್ತಿದ್ದಾರೆ. ಕಾಯಿದೆ ಕಾನೂನು ಗಳಿರುವುದು ಪ್ರತಿಯೊಬ್ಬರ ರಕ್ಷಣೆಗೆ ಹೊರತು ಭಕ್ಷಣೆಗಲ್ಲ. ಹೋಗಲಿ ಅವರಿಗೆ ತಿಂಗಳಿಗೆ ಸರಿಯಾಗಿ ಸಂಬಳ ದೊರೆತರೆ, ಅವರಿಗೆ ಈ ಸೌಲಭ್ಯಗಳ ಅವಶ್ಯಕತೆ ಅಷ್ಟು ಮುಖ್ಯವೆನಿಸುವುದಿಲ್ಲ. ಅವರ ಸಂಬಳವೂ ಸರಿಯಾಗಿ ಇಲ್ಲ. ಅವರ ಆರೋಗ್ಯದ ರಕ್ಷಣೆಯಾಗುತ್ತಿಲ್ಲ. ಆದ್ದರಿಂದ ಅವರ ಪರಿಸ್ಥಿತಿ ಗಂಭೀರವಾಗಿದೆ. ಮಹಿಳೆಯರ ಮೇಲಿನ ಲೈಂಗಿಕ ಕಿರುಕುಳ ಒಂದೆಡೆಯಾದರೆ ಈ ಸೌಲಭ್ಯಗಳಿಂದ ವಂಚಿತರಾಗಿರುವುದು ಇನ್ನೊಂದಡೆ. ಇದು ತೀರ ಅಸಹಾಯಕ ಸ್ಥಿತಿಯಾಗಿದೆ. ಪೌರಕಾರ್ಮಿಕರಾಗಿ ದುಡಿಯುತ್ತಿರುವವರಲ್ಲಿ ಯಾರೂ ಶ್ರೀಮಂತ ಕುಟುಂಬದಿಂದ ಬಂದವರಲ್ಲ. ಶೇಕಡಾ 95% ಜನರು ದಲಿತರು ಮತ್ತು ಬಡತನ ರೇಖೆ ಗಿಂತ ಕೆಳಗಿನವರು. ವಿಶೇಷವಾಗಿ 80% ಮಹಿಳೆಯರು. ಈ ವಿಚಾರಗಳು ಅಧಿಕಾರಿಗಳಿಗೆ ಆಗಲಿ, ರಾಜಕೀಯ ಮುಖಂಡರುಗಳಿಗೆ ಯಾಕೆ ತಿಳಿಯುತ್ತಿಲ್ಲ ? ದೇಶದ ಅಭಿವೃದ್ಧಿಯ ಬಗ್ಗೆ ಚಿಂತನೆ ಮಾಡುವವರು ದೇಶದಲ್ಲಿ ಉದ್ಯಾನವನಗಳನ್ನು, ಕಟ್ಟಡಗಳನ್ನು ನಿರ್ಮಿಸುವುದರಲ್ಲಿ ಅಭಿವೃದ್ಧಿಯ ಸಾಧನೆ ನಿಂತಿದೆ ಎಂದು ತಿಳಿದರೆ ಅದು ಶುದ್ಧ ಮೂರ್ಖತನವಾಗುತ್ತದೆ. ಅದಕ್ಕಿಂತಲೂ ಮಿಗಿಲಾಗಿ ಸರಿಸುಮಾರು 10,000 ಪೌರ ಕಾರ್ಮಿಕರನ್ನು ಒಳಗೊಂಡ ಈ ಉದ್ಯಾನವನದ ಕಾರ್ಮಿಕರ ಹಿತರಕ್ಷಣೆಗೆ ಶ್ರಮಿಸಿದರೆ ನಮ್ಮ ದೇಶದ ಅಭಿವೃದ್ಧಿ ಉತ್ತಮವಾಗಲು ಸಾಧ್ಯ ಮತ್ತು ಅದರಲ್ಲಿ ಅವರ ಸಫಲತೆ ಒಳಗೊಂಡಿದೆ. ಈ ರೀತಿ ಕಾರ್ಯಕ್ರಮಗಳಿಂದ ಈ ಜನರಿಗೆ ನ್ಯಾಯ ದೊರಕಿಸಿಕೊಟ್ಟಂತಾಗುತ್ತದೆ.

ಕಾರ್ಮಿಕರು ಮಾಡುವುದು ಇದು ಮೊದಲ ಧರಣಿಯಲ್ಲ. ಅನೇಕ ಧರಣಿಗಳನ್ನು ಅವರು ಮಾಡಿದ್ದಾರೆ. ಮುಂದೆಯೂ ಅವರಿಗೆ ನ್ಯಾಯ ದೊರಕುವವರೆಗೂ ಮಾಡುತ್ತಾರೆ. ಏಕೆಂದರೆ ಇಂದಿನ ಈ ಧರಣಿಗೆ ಸಂಪೂರ್ಣ ಬೆಂಬಲ ದೊರೆಯಲಿಲ್ಲ. ಯಾವ ಅಧಿಕಾರಿಗಳಾಗಲೀ ರಾಜಕೀಯ ಮುಖಂಡರಾಗಲಿ ಅಷ್ಟು ಒತ್ತು ನೀಡಲಿಲ್ಲ. ಮಹಾನಗರಾಧ್ಯಕ್ಷರು ತಮ್ಮ ರಾಜಕೀಯ ಮಾತಿನಿಂದ ಶಾಂತಿಯುತವಾಗಿ, " ನಾನು ಬೇರೆ ಸಭೆಯಲ್ಲಿ ಇದ್ದೇನೆ, ಒಂದು ದಿನ ಅಂದರೆ ನೀವು ಸಂಘದ ನಾಯಕರು ಬಂದು ನನ್ನನ್ನು ಭೇಟಿ ಮಾಡಿ ಆಗ ನಿಮ್ಮ ಬೇಡಿಕೆಗಳ ಬಗ್ಗೆ ವಿಚಾರಿಸೋಣ" ಎಂದು ಉತ್ತರಿಸಿದರು. 500 ಕ್ಕಿಂತಲೂ ಹೆಚ್ಚು ಪೌರ ಕಾರ್ಮಿಕರು ಅದರಲ್ಲೂ ವಿಶೇಷವಾಗಿ ಮಹಿಳೆಯರು ಸೇರಿದ್ದ ಈ ಸಭೆಯಲ್ಲಿ ಬಂದು ಒಂದು ಅರ್ಧ ಗಂಟೆ ಇವರ ಬೇಡಿಕೆಗಳನ್ನು ವಿಚಾರಿಸದ ಈ ನಾಯಕರಿಗೆ ಇದಕ್ಕಿಂತಲೂ ಮುಖ್ಯ ಸಭೆ ಏನಾಗಿರುತ್ತದೆ ? ಮತ ಕೇಳುವಾಗ ಮನೆ ಮನೆ ತಿರುಗುವ ಈ ನಾಯಕರು ಅಧಿಕಾರಕ್ಕೆ ಬಂದೊಡನೆಯೇ ಜನರ ಮಹತ್ವ ಹೇಗೆ ತಿಳಿಯದಾಗುತ್ತದೆ ಎಂಬುದು ಅಸಹನೀಯ. ನಾವು ಬ್ರಿಟಿಷರಿಂದ ಗೆದ್ದೆವು. ಆದರೆ ಈಗ ನಾವು ಇಂತಹ ಭ್ರಷ್ಟಾಚಾರದ ವಿರುದ್ಧ ಗೆಲ್ಲ ಬೇಕಾಗಿದೆ. ಅದಕ್ಕಾಗಿ ನಾವು ಹೋರಾಡುತ್ತೇವೆ.

**ಕೆ.ಟಿ. ಮನೋರಂಜಿನಿ**

# ಜನಪರ ಚಳುವಳಿಗಳನ್ನು ಹತ್ತಿಕ್ಕುವ ಪ್ರಭುತ್ವದೊಂದಿಗೆ - ಶಾಮೀಲಾಗಿರುವ ಎನ್.ಜಿ.ಓಗಳು - ನಂದಿತಾ ಹಕ್ಸರ್

ಸುಪ್ರೀಂ ಕೋರ್ಟಿನಲ್ಲಿ ವಕೀಲರಾಗಿರುವ ನಂದಿತಾ ಹಕ್ಸರ್ ಅವರು ಮಾನವ ಹಕ್ಕುಗಳ ಹೋರಾಟಗಾರ್ತಿ. ನಾಗಾ ಜನರ ಪ್ರಜಾಸತ್ತಾತ್ಮಕ ಹಕ್ಕುಗಳಿಗಾಗಿ ನಿರಂತರವಾಗಿ ಹೋರಾಡುತ್ತಿದ್ದಾರೆ. ಪಾರ್ಲಿಮೆಂಟ್ ಭವನದ ಮೇಲೆ ದಾಳಿ ನಡೆದ ಸಂದರ್ಭದಲ್ಲಿ ದೆಹಲಿಯ ಕಾಲೇಜೊಂದರಲ್ಲಿ ಪ್ರಾಧ್ಯಾಪಕರಾದ ಸಯದ್ ಅಬ್ದುಲ್ ರಹಮಾನ್ ಗಿಲಾನಿಯವರನ್ನು ಭಯೋತ್ಪಾದಕರ ಸಂಚಿನಲ್ಲಿ ಭಾಗಿಯಾಗಿದ್ದಾರೆಂಬ ಆರೋಪ ಹೊರಿಸಿ ಮರದಂಡನೆ ಶಿಕ್ಷೆಯನ್ನು ವಿಧಿಸಲಾಗಿತ್ತು. ಮುಂದೆ ಈ ಶಿಕ್ಷೆಯನ್ನು ದೆಹಲಿಯ ಹೈಕೋರ್ಟು ರದ್ದ ಪಡಿಸಿತು. ಸತ್ಯವೇನೆಂಬುದನ್ನು ಜನರೆದುರಿಗಿಟ್ಟು, ಶಿಕ್ಷೆ ಅನ್ಯಾಯದ್ದೆಂದು ಸಾಬೀತು ಪಡಿಸಲು ಹೋರಾಡಿದವರಲ್ಲಿ ನಂದಿತಾ ಹಕ್ಸರ್ ಪ್ರಮುಖರು. ಶಾಂತಿಗಾಗಿ ನಾಗರೀಕ ವೇದಿಕೆಯವರು ಏರ್ಪಡಿಸಿದ್ದ 'ತುರ್ತು ಪರಿಸ್ಥಿತಿ ಅಂದು - ಇಂದು' ವಿಚಾರ ಸಂಕಿರಣದಲ್ಲಿ ಭಾಗವಹಿಸಲು ನಂದಿತಾ ಅವರು ಇತ್ತೀಚೆಗೆ ಬೆಂಗಳೂರಿಗೆ ಬಂದಿದ್ದರು. ದಿನಾಂಕ 21.8.05 ರಂದು ಅವರೊಂದಿಗೆ ಸಂವಾದ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಅಲ್ಲಿ ಅವರು ಹಂಚಿಕೊಂಡ ವಿಷಯಗಳನ್ನು ಮಾನಸ ಓದುಗರಿಗಾಗಿ ವರದಿ ಮಾಡಿದ್ದೇವೆ.

ನಾನು ಮೊದಲಿಗೆ ಸ್ವಾಯತ್ತ ಮಹಿಳಾ ಸಂಘಟನೆಗಳೊಂದಿಗೆ ಗುರುತಿಸಿಕೊಂಡಿದ್ದೆ. ಆಗ ನಾವೆಲ್ಲ ವಿಭೂತಿ ಪಟೇಲ್ ಬರೆದಿದ್ದ ಹಾಡುಗಳನ್ನು ಹಾಡುತ್ತಿದ್ದೆವು. ಆ ಹಾಡು ಜಾತಿ, ವರ್ಗದ ಬೇಧವಿಲ್ಲದೆ ಮನೆ, ಗಣಿ, ಹೊಲ, ಕಾರ್ಖಾನೆಗಳಲ್ಲಿ ದುಡಿಯುವ ಮಹಿಳೆಯರೆಲ್ಲರನ್ನೂ ಹೋರಾಟಕ್ಕೆ ಬನ್ನಿ ಎಂದು ಕರೆ ನೀಡುತ್ತಿತ್ತು. ಮುಂದೆ ತೋಡ್ ತೋಡ್ಕೆ ಬಂದನ್ (ಬಂಧನ ಮುರಿದು ಬನ್ನಿ) ಎಂದು ಹಾಡುವಾಗ ಯಾವ ಮಹಿಳೆಯರಿಗೆ ಕರೆ ನೀಡುತ್ತಿದ್ದೇವೆಂಬುದು ಅಸ್ಪಷ್ಟವಾಯಿತು. ಇಂದು **ಸಮಾನತೆಗಾಗಿ ಹೋರಾಡುವ ಮಹಿಳಾ ಚಳುವಳಿ, ಮಾನವ ಹಕ್ಕುಗಳ ಚಳುವಳಿ ಎಲ್ಲವನ್ನು ಪ್ರಭುತ್ವ Co-opt ಮಾಡಿಕೊಂಡಿದೆ. ಈ ಪ್ರಕ್ರಿಯೆಯಲ್ಲಿ ಎನ್.ಜಿ.ಓಗಳು ಸಕ್ರಿಯವಾಗಿ ಶಾಮೀಲಾಗಿವೆ. ಈ ಕಾರಣಕ್ಕೆ ಹಕ್ಕುಗಳು ಮತ್ತು ಸಂಘಟಿತ ಪ್ರಯತ್ನಗಳಿಗಿಂತ ಸುಧಾರಣೆಗಳ ಬಗ್ಗೆ ಹೆಚ್ಚು ಮಾತನಾಡಲಾಗುತ್ತಿದೆ. ಪ್ರತಿಯೊಂದು ಸಮಸ್ಯೆಯನ್ನು ರಾಜಕೀಯ ರಾಹಿತ್ಯಗೊಳಿಸಲಾಗುತ್ತಿದೆ. ಪ್ರಜಾ ಸತ್ತಾತ್ಮಕ ಅವಕಾಶಗಳನ್ನು ಕಸಿದುಕೊಂಡು, ಹೋರಾಟಗಳನ್ನು ಹತ್ತಿಕ್ಕಲಾಗುತ್ತಿದೆ.**

ಇಂದಿನ ಪರಿಸ್ಥಿತಿಯು, ತುರ್ತುಪರಿಸ್ಥಿತಿಯ ಸಂದರ್ಭಕ್ಕಿಂತಲೂ ಗಂಭೀರವಾಗಿದೆ. ಹಿಂದೆ ದೂರದರ್ಶನದಲ್ಲಿದ್ದುದು ಒಂದೇ ಚಾನಲ್. **ಇಂದು ಇಡೀ ದೂರದರ್ಶನ ಮಾಧ್ಯಮವೇ ಕಾರ್ಪೊರೇಟ್ ಕ್ಷೇತ್ರದ ಹಿಡಿತದಲ್ಲಿದೆ. ಎಲ್ಲಾ ಧಾರವಾಹಿಗಳು ಒಂದೇ** ಮಾದರಿಯನ್ನು ಪ್ರತಿನಿಧಿಸುತ್ತಿವೆ. ಎಲ್ಲಾ ಪಾತ್ರಗಳು ಉತ್ತರ ಭಾರತದ ಮೇಲ್ಜಾತಿ ಮೇಲ್ವರ್ಗಕ್ಕೆ ಸೇರಿದವರೇ ಆಗಿದ್ದಾರೆ. ದಮನಿತ ಜನರ ಹಕ್ಕು ಆಶಯಗಳನ್ನು ಕಾಣುವುದೇ ಇಲ್ಲ. **ವಿಸ್ತಾರ ಗೊಂಡಿರುವ ಮಧ್ಯಮವರ್ಗದ ಜನರಿಗೆ ದಮನಿತರ ವಿಷಯ ಬೇಕಾಗಿಯೇ ಇಲ್ಲ.**

ತುರ್ತು ಪರಿಸ್ಥಿತಿಯ ನಂತರದಲ್ಲಿ ಮಹಿಳಾ ಚಳುವಳಿ, ಮಾನವ ಹಕ್ಕುಗಳ ಚಳುವಳಿಯು ಪ್ರಭುತ್ವವನ್ನು ಪ್ರಶ್ನಿಸಿ ಪಡೆದುಕೊಂಡಿದ್ದ ಪ್ರಜಾಸತ್ತಾತ್ಮಕ ಅವಕಾಶಗಳನ್ನು ತುಳಿಯಲಾಗುತ್ತಿವೆ. ಇದಕ್ಕೆ ಬಹುಮುಖ್ಯ ಕಾರಣಗಳೆಂದರೆ ಪ್ರಭುತ್ವದ ದಮನಕಾರಿ ನಿಲುವನ್ನು ಸಮರ್ಥಿಸುವ ಮಾಧ್ಯಮಗಳು ಮತ್ತು ಎನ್.ಜಿ.ಓಗಳ ಮೂಲಕ ಹರಿದು ಬರುತ್ತಿರುವ ವಿದೇಶಿ ಹಣ. ಹೆಚ್ಚುತ್ತಿರುವ ಜೈಲುಗಳ ಸಂಖ್ಯೆಯೇ ಕುಸಿದಿರುವ ಪ್ರಜಾಸತ್ತಾತ್ಮಕ ಅವಕಾಶಗಳನ್ನು ತೋರಿಸುತ್ತಿದೆ. ದೆಹಲಿಯ ತಿಹಾರ್ ಜೈಲು ದಕ್ಷಿಣ ಏಷಿಯಾದಲ್ಲೆ ಅತ್ಯಂತ ದೊಡ್ಡ ಬಂಧೀ ಖಾನೆ ಸಂಕೀರ್ಣವಾಗಿ ಬೆಳೆದಿದೆ. ಬಹುತೇಕ ಜೈಲಿನಲ್ಲಿ ಕೊಳೆಯುತ್ತಿರುವವರು ಬಡವರ, ಮುಸ್ಲಿಂ ಸಮುದಾಯದ ಮಧ್ಯಮವರ್ಗದವರು.

ನಾಗರೀಕರ ಪಾಲ್ಗೊಳ್ಳುವಿಕೆ ಎಂದು ಪ್ರಭುತ್ವವು ಮಣೆ ಹಾಕುತ್ತಿರುವುದು ಎನ್.ಜಿ.ಓಗಳನ್ನು. ಇದಕ್ಕೊಂದು ಸಣ್ಣ ಉದಾಹರಣೆ ಎಂದರೆ. ಅಸಂಘಟಿತ ವಲಯದ ಕಾರ್ಮಿಕರಿಗೆ ಸಂಬಂಧ ಪಟ್ಟ ಕಾಯ್ದೆ ಕುರಿತಂತೆ ಕೇಂದ್ರ ಸರ್ಕಾರ ಚರ್ಚೆಗೆ ಕರೆದಿದ್ದು ಎನ್. ಜಿ. ಓಗಳನ್ನು ಮಾತ್ರ. ವಿಶ್ವಮಹಿಳಾ ಸಮಾವೇಶದಲ್ಲಿ ಪಾಲ್ಗೊಳ್ಳಲು ನಾನು ಬೀಜಿಂಗ್‌ಗೆ ಹೋದಾಗ ನಾನು ಪ್ರತಿನಿಧಿಸುವ ದೇಶ ಭಾರತ ಎಂಬ ಗುರುತಿನೊಂದಿಗೆ ಭಾಗವಹಿಸಲು ಅವಕಾಶ ನೀಡಲಿಲ್ಲ. ನಾನು ಯಾವ ಎನ್.ಜಿ.ಓವನ್ನು ಪ್ರತಿನಿಧಿಸುತ್ತೇನೆಂಬುದು ವ್ಯವಸ್ಥಾಪಕರಿಗೆ

ಮುಖ್ಯವಾಗಿತ್ತು. ಆ ಸಮಯದಲ್ಲಿ ಸ್ನೇಹಿತರೊಬ್ಬರ ಸಹಾಯದಿಂದ ಯಾವೊದೋ ಒಂದು ಎನ್.ಜಿ.ಓದ ಪ್ರತಿನಿಧಿ (ಆ ಎನ್.ಜಿ.ಓ ಹೆಸರೂ ಗೊತ್ತಿಲ್ಲ) ಎಂಬ ಸುಳ್ಳು ಗುರುತಿನೊಂದಿಗೆ ಬೀಜಿಂಗ್ ಸಮಾವೇಶದಲ್ಲಿ ಪಾಲ್ಗೊಂಡೆ.

ಮೈವಾರನ್ನು ಬಂಧಿಸಲಾಯಿತು. ಸಂಧಾನಕಾರರಾಗಿದ್ದ ಅವರ ಸೋದರ ಸಂಬಂಧಿಯನ್ನು ಸುಳ್ಳು ಕೇಸಿನಲ್ಲಿ ಬಂಧಿಸಲಾಯಿತು. ಒಡೆದಾಳುವ ನೀತಿಗೆ ಅನುಕೂಲ ಮಾಡಿಕೊಡಲು ಅಭಿವೃದ್ಧಿ ಕಾರ್ಯಕ್ರಮಗಳ ಹೆಸರಿನಲ್ಲಿ ವಿದೇಶಿ ಹಣದ

ಸಾರ್ವಭೌಮತೆ, ಸಮಗ್ರತೆ ಕುರಿತು ಮಾತನಾಡುವ ಸರ್ಕಾರವು ಅಮೇರಿಕದ ಇಂಟೆಲಿಜೆನ್ಸ್ ವ್ಯವಸ್ಥೆಯಾದ ಎಫ್ ಬಿ ಐನ ಶಾಖೆಯನ್ನು ಭಾರತದಲ್ಲಿ ತೆರೆಯಲು ಅನುವು ಮಾಡಿಕೊಡುತ್ತದೆ. ಇಸ್ರೇಲಿ ಆಹಾರ ಪದ್ಧತಿಯ ಪ್ರದರ್ಶನ, ಸಂಸ್ಕೃತಿಯ ಪ್ರದರ್ಶನಗಳ ಮೂಲಕ ಬಂದ ಇಸ್ರೇಲಿನ ಭಾಂದವ್ಯ ಭಾರತೀಯ ಸೇನೆಯನ್ನು ತರಭೇತಿಗೊಳಿಸುವಷ್ಟು ಗಾಢವಾಗಿದೆ. ಇದೇ ಸರ್ಕಾರ, ಕುಲದೀಪ್ ನಯ್ಯರ್ ಅವರು ಪಾರ್ಲಿಮೆಂಟಿನಲ್ಲಿ ನಾಗಜನರೊಂದಿಗಿನ ಶಾಂತಿ ಮಾತುಕತೆ ಏನಾಯ್ತು ಎಂದು ಕೇಳಿದರೆ, ಅದು ಅತ್ಯಂತ ಸೂಕ್ಷ್ಮವಾದ ವಿಚಾರವಾದ್ದರಿಂದ ಬಹಿರಂಗೊಳಿಸಲಾಗುವುದಿಲ್ಲ ಎಂದು ಜಾರಿಕೊಳ್ಳುತ್ತದೆ. ಪ್ರತಿಯೊಂದು ಕಾಯ್ದೆಗಳು ಅನಿವಾಸಿ ಭಾರತೀಯರ, ವಿಶ್ವಬ್ಯಾಂಕಿನ, ಸಾಮ್ರಾಜ್ಯಶಾಹಿ ವಿದೇಶಿ ಕಂಪೆನಿಗಳ ಆಶಯಕ್ಕೆ ತಕ್ಕಂತೆ ಬದಲಾಗಿವೆ. ವಿಶ್ವ ಮಾರುಕಟ್ಟೆ ಯಲ್ಲಿ ಭಾರತೀಯ ಮಾರುಕಟ್ಟೆಯನ್ನು ಸ್ಥಾಪಿಸುವುದೇ ಸರ್ಕಾರದ ಗುರಿಯಾಗಿದೆ.

**ಜನಪರ ಆಶಯುಗಳಿಗೆ ದನಿಯಾದ ಚಳುವಳಿಗಳನ್ನು ಭಯೋತ್ಪಾದನೆ ಹೆಸರಿನಲ್ಲಿ, ಕಾನೂನು ಸುವ್ಯವಸ್ಥೆ ಸಮಸ್ಯೆ ಎಂಬ ಹೆಸರಿನಲ್ಲಿ ಹತ್ತಿಕ್ಕಲಾಗುತ್ತಿದೆ.** ನಾನು ಬೆಂಬಲಿಸುವ ನಾಗಜನರ ಪ್ರಜಾಸತ್ತಾತ್ಮಕ ಹೋರಾಟದ ಹಿನ್ನೆಲೆಯಲ್ಲಿ ಹೇಳುವುದಾದರೆ ಶಾಂತಿ ಮಾತುಕತೆಯ ಮೂಲಕ ಜನರ ಆಶಯಗಳಿಗೆ ಸ್ಪಂದಿಸುವ ಇಚ್ಚೆ ಸರ್ಕಾರಕ್ಕೆ ಇಲ್ಲ. ಬದಲಿಗೆ ಮಾತುಕತೆಯ ಪ್ರಕ್ರಿಯೆಯನ್ನು ಸರ್ಕಾರ ಬಳಸಿಕೊಳ್ಳುತ್ತಿರುವುದು ಚಳುವಳಿಯನ್ನು ಹತ್ತಿಕ್ಕಲು ಎಂಬುದು ಹಲವಾರು ಬೆಳವಣಿಗೆಯ ಮೂಲಕ ಸಾಬೀತಾಗಿದೆ. ಮಾತುಕತೆಗೆ ಒಪ್ಪಿಸುವ ಸಲವಾಗಿ ಪ್ರಧಾನ ಮಂತ್ರಿಗಳಾಗಿದ್ದ ನರಸಿಂಹರಾವ್ ಅವರು ನಾಗ ಚಳುವಳಿಯ ಭೂಗತ ನಾಯಕರಾಗಿದ್ದ ಮೈವಾರನ್ನು ಫ್ರಾನ್ಸ್‌ನಲ್ಲಿ ಭೇಟಿಯಾಗಿ ಬಂದಿದ್ದರು. ನಂತರ ದೇವೆಗೌಡರು ಪ್ರಧಾನ ಮಂತ್ರಿಗಳಾಗಿದ್ದಾಗ ಮೈವಾರನ್ನೂ ಜೂರಿಚ್‌ನಲ್ಲಿ ಭೇಟಿಯಾಗಿದ್ದರು. ನಂತರ ಆದ ಒಪ್ಪಂದದಲ್ಲಿ ಮೂರು ತೀರ್ಮಾನಗಳನ್ನು ತೆಗೆದುಕೊಳ್ಳಲಾಗಿತ್ತು. ಅವೆಂದರೆ

- ಮಾತುಕತೆ ಪ್ರಧಾನ ಮಂತ್ರಿಗಳ ಮಟ್ಟದಲ್ಲಿ ಅಂದರೆ ಭಾರತ ಸರ್ಕಾರದ ಪ್ರಧಾನಿ ಮತ್ತು ನಾಗಜನರು ಪ್ರಧಾನಮಂತ್ರಿ ಎಂದು ಪರಿಗಣಿಸಿರುವ ಮೈವಾರ ನಡುವೆ ನಡೆಯಬೇಕು.
- ಮಾತುಕತೆಯನ್ನು ಭಾರತದಿಂದ ಹೊರಗೆ ನಡೆಸಬೇಕು.
- ಮಾತುಕತೆಯನ್ನು ಬೇಷರತ್ತಾಗಿ ನಡೆಸಬೇಕು.

ಆದರೆ ಗುಪ್ತಾಚಾರದಳದ ಇಂಟೆಲಿಜೆನ್ಸ್ ಬ್ಯೂರೊ ಹಾಗು ಲಾ ಸಂಸ್ಥೆಗಳ ನಡುವಿನ ಕಿತ್ತಾಟದಿಂದಾಗಿ ಮಾತುಕತೆಗೆಂದು ಬರುತ್ತಿದ್ದ

ಎನ್.ಜಿ.ಓಗಳು ನಾಯಿಕೊಡೆಗಳಂತೆ ಹುಟ್ಟಿಕೊಂಡವು. ನಾಗ ಜನರ ಹೋರಾಟವನ್ನು ವ್ಯವಸ್ಥಿತವಾಗಿ ಅಪ ಪ್ರಚಾರಗೊಳಿಸಲಾಗುತ್ತಿದೆ. ಅವರ ಅಸ್ತಿತ್ವಕ್ಕೆ ಅಪಾರ್ಥ ಕಲ್ಪಿಸಲಾಗುತ್ತಿದೆ. ಜನರ ಆಶಯಗಳನ್ನು ಈಡೇರಿಸುವ ಇಚ್ಛಾಶಕ್ತಿಯೇ ಇಲ್ಲದಿರುವುದರಿಂದಲೇ 42 ಸುತ್ತಿನ ಮಾತಿಕತೆಗಳಾದರೂ ಪರಿಹಾರವನ್ನೂ ಸಿಕ್ಕಿಲ್ಲ. **ಒಂದು ಹಂತದಲ್ಲಿ ಮಾತುಕತೆಯ ನಾಟಕವಾಡುತ್ತ, ಇನ್ನೊಂದು ಹಂತದಲ್ಲಿ ನಾಗರೀಕ ಸಮಾಜದ ಪ್ರಯತ್ನ (ಜನಪರ ಚಳುವಳಿಗಳು ನಾಗರೀಕ ಸಮಾಜವಲ್ಲ !) ವೆಂದು ಎನ್.ಜಿ.ಓಗಳ ಮೂಲಕ ನಿಜವಾದ ವಿಷಯನ್ನೆ dilute ಮಾಡುವುದು ಸರ್ಕಾರದ ಕುತಂತ್ರವಾಗಿದೆ.**

ಪ್ರಜಾಸತ್ತಾತ್ಮಕ ಅವಕಾಶಗಳಿಗಾಗಿ, ಪಾರದರ್ಶಕತೆಗಾಗಿ ಒತ್ತಾಯಿಸುವುದು, ಬಹು ಸಂಖ್ಯೆಯಲ್ಲಿರುವ ಜನತಾಂತ್ರಿಕ ಪ್ರಜ್ಞೆಯುಳ್ಳ ಜನರನ್ನು politicise ಮಾಡುವುದು ಇಂದಿನ ತುರ್ತಾಗಿದೆ. ಚಳುವಳಿಗಳು ಸ್ವಾಯತ್ತತೆಯನ್ನು ಕಾಯ್ದುಕೊಳ್ಳಬೇಕು. ಅಲೈಯನ್ಸ್‌ನ ಪ್ರಶ್ನೆ ಬಂದಾಗ ಯಾರೊಂದಿಗೆ, ಯಾವ ವಿಷಯಕ್ಕೆ, ಎಷ್ಟರ ಮಟ್ಟಿಗೆ ಎಂಬುದರ ಬಗ್ಗೆ ಸ್ಪಷ್ಟತೆ ಇರಬೇಕು. ಒಂದು ಸಂಘಟನೆಯೊಂದಿಗೆ ಗುರುತಿಸಿಕೊಂಡು ಬದ್ದತೆಯಿಂದ ಕೆಲಸಮಾಡುವುದರಿಂದ ಬೇರೆ ಬೇರೆ ಸಮಸ್ಯೆಗಳನ್ನು ಸಮರ್ಥವಾಗಿ ಅರ್ಥಮಾಡಿಕೊಳ್ಳುವುದು. ಹಾಗೆ ನನಗೆ ಮಹಿಳೆ ಎಂಬ ನನ್ನ ಐಡೆಂಟಿಟಿ ಬೇರೆ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿದೆ.

**ದು. ಸರಸ್ವತಿ**

ಮಾನಸಿ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

**ಸಂ.ಮಂಡಳಿ**

REGD No. : CPMG/KA/BGE/289/2003 - 05

BOOK-POST
PRINTED MATTER




22. Manjula C.G.No.4,
Vaishaka, 2nd Cross,
Marakam Road,
Ashok Nagar,
Bangalore-560 025.

ವಿಳಾಸ:

**ಮಾನಸ**

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067